# ಅಚಲ

22

ಬಿಡಿಪ್ರತಿ : 4 ರೂ.

ತಿಂಗಳ ಪತ್ರಿಕೆ

ಫೆಬ್ರವರಿ - 2007

## ಒಳಗೇನಿದೆ






ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,

ಬೆಂಗಳೂರು

# ಅಚಲ

ಸಂಪುಟ - 22 ಸಂಚಿಕೆ : 2

*ಸಂಪಾದಕ ಮಂಡಳಿ*

ಎನ್. ಗಾಯತ್ರಿ
ನೇಮಿಚಂದ್ರ, ದೇವಿ,
ಶಾಂತಾ ನಾಗರಾಜ್
ಹೆಚ್. ಎನ್. ಗೀತಾ
ಹೇಮಲತಾ ಮಹಿಷಿ

*ಪ್ರಕಾಶಕರು*

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,
ಬೆಂಗಳೂರು

ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು. ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.

**Achala - Edited by**
**Dr. N. Gayathri**

**Published by**
**Dr. G. Ramakrishna on behalf of Jagruthi Mahila Adhyayana Kendra**

**Printed at**
Lipi Mudrana
**Bangalore - 560 004**


## "ಗೂರ್ಖ"

ಎರಡು ಜಡೆಯ
ಹುಡುಗಿ ನಾನಾಗ
ಬಿಡಿಸಬಾರದ ಗೂಢ ಕತ್ತಲು
ನಿಶ್ಶಬ್ದದ ಹೆಣನೋಟ
ಕಣ್ಣು ಹಾಯ್ದಷ್ಟೂ ಹಿರಿದು
ಹರಿದು ತಿನ್ನುವ ಭಯ
ಭಯಗಣ್ಣ ಬಿಡಿಸಿ ಬಿಡಿಸಿ
ಹೊದಿಕೆಯೊಳಗೇ ಬಿಡುವಾಗ
ನಾಗಾಲೋಟ ಎದೆಬಡಿತ
ಪಸೆಯಾರಿದ ಹತ್ತಿ ತುಟಿ
ಬೆಂಡು ಬೆಂಡು
ಉಸಿರುಗಟ್ಟುವ ಉಸಿರು ಬಿಡುವಾಗ
ಜಗುಲಿ ಚಪ್ಪಡಿಯ ಲಾಠಿಯಲಿ ಕುಟ್ಟಿ
ಬಾಯಿಂದ ಊದಿ ಸೀಟಿ
ಸರಿರಾತ್ರಿಯಲಿ ಕತ್ತಲ ಕರಗಿಸದ
ಸೂರ್ಯನ ಮೂಡಿಸಿ ಬಿಡುತ್ತಿದ್ದ
ಊರು ಕೇರಿ ಕಾಯುವ
ನಾನೆಂದೂ ನೋಡಿರದ
ಆ ಗೂರ್ಖ !
ಕಾಯುವವನೇ ಭಯ ಮೂಡಿಸಿ
ಕಾಡುವುದು ಆಗಿಂದ ಈ ತನಕ
ನನ್ನ ಕಾಡುವ ದೊಡ್ಡ ನಿಗೂಢ !
ಒಂದು ಜಡೆಯ ಹೆಂಗಸು
ಮತ್ತದೇ ಕತ್ತಲು
ಬಿಗಿದ ಉಸಿರು
ಎದೆಯ ಲಬಡಬ
ಅದೇ ಲಾಠಿ, ಅದೇ ಶೀಟಿ
ಇಂದೂ ಅವನ ಮುಖ ನೋಡಿಲ್ಲ
ನಿದ್ದೆಗೆಡುವುದೂ ತಪ್ಪಿಲ್ಲ
ತೆರೆ ಸರಿಸಿ ಮರೆಯಿಂದ
ಇಂದಿರಲಿ ನಾಳೆಯೂ
ಅವನ ಮೋರೆ ನೋಡೇನೆಂಬ
ಭರವಸೆ ಧೈರ್ಯ ನನ್ನಲ್ಲಿಲ್ಲ.
ಈ ನಡುವೆ ನಡುಹಗಲಲ್ಲಿ
ಕಾಲಿಂಗ್ ಬೆಲ್ ಒತ್ತಿ
ಬತ್ತಿ ಹೋದ ದನಿಯಲ್ಲಿ
"ಗೂರ್ಖಾಮ್ಮ"
ಎಂದು ದೀನನಾಗಿ
ಕಾಫಿ ಕಾಸಿಗೆಂದು ಕೈ ಒಡ್ಡುವ
ಈ..... ಇವನನ್ನು
ಆ..... ಅವನೆಂದು
ಮನಸ್ಸು ಸುತರಾಂ
ಒಪ್ಪಿಕೊಳ್ಳುವುದೇ ಇಲ್ಲ.

*ಎಂ. ಎಸ್. ವೇದಾ*

# ಈ ಪುರುಷಾಹಂಕಾರಕ್ಕೆ ಕೊನೆಯೆಲ್ಲಿ ?

ಇಪ್ಪತ್ತೊಂದನೆಯ ಶತಮಾನದ ಹೊಸ್ತಿಲಲ್ಲಿ, ನಾಗರೀಕ ಸಮಾಜದಲ್ಲಿ ವಾಸಿಸುತ್ತಿದ್ದೇವೆಂದು ಸಂಭ್ರಮಿಸುತ್ತಿರುವ ಈ ಹೊತ್ತಿನಲ್ಲಿ ಹೆಣ್ಣು ಮಾತ್ರ ಎಂದಿನ ಎರಡನೆಯ ಪ್ರಜೆಯಾಗಿ, ಇನ್ನೂ ಹೆಚ್ಚೆಂದರೆ ಪುರುಷಾಧಿಪತ್ಯದ ಕರಿನೆರಳಲ್ಲಿ ಅವಮಾನಿತಳಾಗಿಯೇ ಬದುಕಬೇಕಿದೆ. ಶಿಕ್ಷಣ, ರಾಜಕೀಯ, ಸಾರ್ವಜನಿಕ ಜೀವನದ ಯಾವ ಹಂತದಲ್ಲೂ ಮಹಿಳೆಯನ್ನು ಸಮಾಜದ ಅಗತ್ಯಪೂರ್ಣ ಘಟಕವಾಗಿ ಸ್ವೀಕರಿಸಲು ಪುರುಷಪ್ರಜ್ಞೆಗೆ ಸಾಧ್ಯವೇ ಆಗದಿರುವುದು ವಿಷಾದನೀಯ, ಅಷ್ಟೇ ಅಲ್ಲ ಖಂಡನೀಯವೂ ಹೌದು.

ನಮ್ಮ ದೇಶದ ಮಕ್ಕಳನ್ನು ಭವಿಷ್ಯದ ಹೆಮ್ಮೆಯ ಪ್ರಜೆಗಳಾಗಿ ರೂಪಿಸಲು ಸರ್ಕಾರವು ನೀಡುವ ಎಂಜಿನಿಯರ್ ಮತ್ತು ವೈದ್ಯಕೀಯ ಶಿಕ್ಷಣಕ್ಕೆ ನಡೆಸುವ ಪ್ರವೇಶ ಪರೀಕ್ಷೆಗಳಲ್ಲಿ ಹೊರನಾಡು ಕನ್ನಡಿಗರಿಗೂ ಒಂದು ಅವಕಾಶ ಕಲ್ಪಿಸುತ್ತಿದೆ. ಸುವರ್ಣ ಕರ್ನಾಟಕದ ಸಂಭ್ರಮದ ಈ ವರ್ಷ ಕರ್ನಾಟಕದ ವಿದ್ಯಾ ಇಲಾಖೆ ತೆಗೆದುಕೊಂಡಿರುವ ಕ್ರಮದಿಂದ ಮಹಿಳೆಯರಿಗೆ ನೇರವಾಗಿ ಅವಮಾನ ಮಾಡಿದಂತಾಗಿದೆ. ಈ ವರ್ಷದ ಹೊಸ ಪದ್ಧತಿಯಲ್ಲಿ 'ಹೊರನಾಡು ಕನ್ನಡಿಗರು' ಯಾರು ಎಂಬುದಕ್ಕೆ ವ್ಯಾಖ್ಯಾನ ನೀಡುವಾಗ ಹೊರನಾಡಿನಲ್ಲಿರುವ ಕನ್ನಡ, ಕೊಡವ ಅಥವಾ ತುಳು ಭಾಷೆಗಳು 'ಮಾತೃಭಾಷೆ'ಯಾಗಿರುವ 'ತಂದೆ'ಯ ಮಕ್ಕಳು ಮಾತ್ರ ಅರ್ಹರಾಗಿರುತ್ತಾರೆ. ಈವರೆಗೆ ಹೊರನಾಡಿನಲ್ಲಿರುವ ಕನ್ನಡ, ಕೊಡವ, ತುಳು ಭಾಷೆಗಳ ತಾಯ್ತಂದೆಯರಿಬ್ಬರ ಮಕ್ಕಳೂ ಹೊರನಾಡ ಕನ್ನಡಿಗರೆಂಬ ವ್ಯಾಖ್ಯಾನದ್ದೊಳಕ್ಕೆ ಬರುತ್ತಿದ್ದರು. ಮಾತೃಭಾಷೆಯ ಬಗ್ಗೆ ಮಾತನಾಡುವ ಈ ಶಿಕ್ಷಣ ಇಲಾಕೆಗೆ 'ಮಾತೃ' ಏಕೆ ಬೇಡವಾದಳು ? ಎಂಬುದು ವಿಸ್ಮಯದೊಂದಿಗೆ ರೋಷ ಹುಟ್ಟಿಸುತ್ತದೆ. 'ಮನೆಯೇ ಮೊದಲ ಪಾಠಶಾಲೆ, ಜನನಿ ತಾನೆ ಮೊದಲ ಗುರುವು' ಎಂದ ಕನ್ನಡ ಸಂಸ್ಕೃತಿಗೆ 'ತಾಯಿ' ಏಕೆ ಪರಕೀಯಳಾದಳು ? ಇದು ಸಂವಿಧಾನ ವಿರೋಧಿಯಾದುದು. ಶಿಕ್ಷಣ ಇಲಾಖೆಯ ಈ ನಿರ್ಧಾರವನ್ನು ಎಲ್ಲ ಪ್ರಜ್ಞಾವಂತರೂ ಚಿಂತಿಸಿ, ಚರ್ಚಿಸಿ, ಖಂಡಿಸಬೇಕಿದೆ.

ಅಕ್ಷರ ಜಗತ್ತಿನ ಈ ಪುರಷಾಹಂಕಾರದ ಒಂದು ಸ್ವರೂಪ ಇದಾದರೆ ಅನಕ್ಷರಸ್ಥ ತಾಯಿಯ ತೇಜೋವಧೆಯನ್ನು ಸಾಹಿತ್ಯದ ಶ್ರೇಷ್ಠರು ಮತ್ತೊಂದು ರೀತಿಯಲ್ಲಿ ಮಾಡುತ್ತಿದ್ದಾರೆ. ಜ್ಞಾನಪೀಠದ ಸುಭದ್ರ ಕವಚದಲ್ಲಿರುವವರಿಗೆ ತಮ್ಮ ಮಾತು ಏನಾಡಿದರೂ ವೇದವಾಕ್ಯವಾಗಿ ಬಿಡುತ್ತದೆ ಎಂಬ ಭ್ರಮೆಯಿರಬಹುದು. "ಹಿಂಸಾಚಾರಕ್ಕೆ ಇಳಿಯುವ, ಪ್ರತಿಕೃತಿ ಸುಡುವ ಹಾಗೂ ಬೀದಿಯಲ್ಲಿ ಕಿರುಚಾಡುವ ಹುಡುಗರಿಗೆ ಬಹುಶಃ ವಿದ್ಯಾವಂತ ತಾಯಿ ಲಭ್ಯವಾಗಿರಲಿಕ್ಕಿಲ್ಲ, ಒಂದು ವೇಳೆ ಈ ಎಲ್ಲ ಯುವಕರಿಗೆ ಅಕ್ಷರ ಕಲಿತ ತಾಯಿ ದೊರೆತಿದ್ದರೆ ಆ ಹುಡುಗರು ಇಷ್ಟು ಕೆಡುತ್ತಿರಲಿಲ್ಲ, ಹಾಗಾಗಿದ್ದರೆ ಆ ಎಲ್ಲ ಮನೆಗಳ ಸ್ವರೂಪವೇ ಬದಲಾಗುತ್ತಿತ್ತು" ಎಂದು ಇತ್ತೀಚೆಗೆ ಡಾ॥ ಯು.ಆರ್. ಅನಂತಮೂರ್ತಿಯವರು ಭಾಷಣವೊಂದರಲ್ಲಿ ಆಡಿರುವ ಮಾತುಗಳು ಹೆಣ್ಣಿನ ಅನಕ್ಷರತೆಯ ಬಗ್ಗೆ ಬೊಟ್ಟು ಮಾಡಿ ಹೀಯಾಳಿಸುವುದಷ್ಟೇ ಅಲ್ಲದೆ ಅಂತಹ ಮಾತೆಯ ಮಕ್ಕಳನ್ನೆಲ್ಲಾ ಒಟ್ಟಾರೆಯಾಗಿ ಅವಮಾನಿಸುತ್ತದೆ. ಅಭಿವ್ಯಕ್ತಿ ಸ್ವಾತಂತ್ರ್ಯ ಮತ್ತು ಪ್ರತಿಭಟನೆಯ ಸ್ವರೂಪ ಹೇಗಿರಬೇಕು ಎಂಬ ಚರ್ಚೆ ಇಲ್ಲಿ ಅಪ್ರಸ್ತುತ. ಆದರೆ ಅಕ್ಷರದ ಅಹಂಕಾರ ಮತ್ತು ಲಿಂಗ ಅನ್ಯಾಯದ ಮಾತುಗಳು ಸಂಬಂಧಪಟ್ಟವರ ಮನ ನೋಯಿಸುತ್ತದೆ. ಶಿಕ್ಷಣದ ಅವಕಾಶ ನೀಡುವ ಸಂದರ್ಭದಲ್ಲಿ ಅಮುಖ್ಯಳಾಗುವ ತಾಯಿ, ಮಕ್ಕಳ ತಪ್ಪಿಗೆ ಕಾರಣಕರ್ತಳಾಗಬೇಕಾದ ವಧಾಸ್ಥಾನ ಏಕೆ ? ಅಕ್ಷರಸ್ಥ / ಅನಕ್ಷರಸ್ಥ ಅಪ್ಪಂದಿರಿಗೆ ಯಾವ ಜವಾಬ್ದಾರಿಯೂ ಇಲ್ಲವೇ ?

ಹೆಣ್ಣು ಎದುರಿಸಬೇಕಾದ ಈ ನೋವಿನ ಜಗತ್ತಿಗೆ ಬರೆಯಳೆಯುವಂತೆ ನಮ್ಮ 'ಮಾನ್ಯ' ಸಭಾಪತಿಗಳು ಶಾಸನ ಸಭೆಯಲ್ಲಿ ಕಚ್ಚಾಡುತ್ತಾ, ವಾಗ್ವಾದ ನಡೆಸುತಿದ್ದ ಪುರುಷ ರಾಜಕಾರಣಿಗಳಿಗೆ "ಗಲಾಟೆ ನಿಲ್ಲಿಸಿ. ಇದೇನು ಹೆಂಗಸರಂತೆ ಕಿರಿಚಾಡುತ್ತಿದ್ದೀರಾ ?" ಎಂದ ಮಾತುಗಳು ಪುರುಷರ ಕನ್ನಡಕದಲ್ಲಿ ಮಹಿಳೆಯರ ಪ್ರತಿನಿಧೀಕರಣ ಹೇಗಿದೆಯೆಂಬುದಕ್ಕೆ ಉತ್ತಮ ನಿದರ್ಶನವಾಗಿದೆ.

– ಎನ್. ಗಾಯತ್ರಿ

# ವಿಮಲ್ ರಣದಿವೆ

ವಿಮಲ್ ರಣದಿವೆಯವರು ನಿರುದ್ವಿಗ್ನರಾಗಿ ಹೇಳಿದರು : "ನಾನಾಗ ಗಾಂಧೀಜಿಯನ್ನು ಕಂಡೆ. ಅಗಾಧ ಸಂಖ್ಯೆಯ ಹೆಂಗಸರು ಮತ್ತು ಗಂಡಸರ ಗುಂಪಿನಿಂದ ಸುತ್ತುವರಿಯಲ್ಪಟ್ಟಿದ್ದ ಗಾಂಧೀಜಿ ನೆಲದ ಮೇಲೆ ಕುಳಿತಿದ್ದರು. ಅವರ ಉಡುಗೆ ಸಾಧಾರಣವಾಗಿತ್ತು ಮತ್ತು ಅವರ ಭಾಷೆ ಸರಳ. ಅವರ ಸುತ್ತ ಕುಳಿತಿದ್ದವರಲ್ಲಿ ಅನೇಕರು ಬಡವರು, ಆದಾಗ್ಯೂ ಅವರ ಬಳಿ ಇದ್ದ ಕಿಂಚಿತ್ ಆಭರಣಗಳನ್ನು ಹಾಗೂ ಬೇರೆಯ ಅಮೂಲ್ಯ ವಸ್ತುಗಳನ್ನು ಗಾಂಧೀಜಿಗೆ ಕೊಟ್ಟರು. ಎಲ್ಲವೂ ರಾಷ್ಟ್ರೀಯ ಚಳವಳಿಗೆ ಕೊಡಲಾಗುತ್ತಿದ್ದ ಕಾಣಿಕೆ." ಈ ಘಟನೆಯಾದ ಸುಮಾರು ಎಪ್ಪತ್ತು ವರ್ಷಗಳ ತರುವಾಯದಲ್ಲಿ ಈ ಪ್ರಸಂಗದ ಬಗ್ಗೆ ಸಂಭಾಷಿಸುತ್ತಾ ಅದರ ಗಹನತೆ ಮತ್ತು ಮಹತ್ವವನ್ನು ವಿಮಲಾ ತಮ್ಮದೇ ಸರಳ ಭಾಷೆಯಲ್ಲಿ ವಿವರವಾಗಿ ತಿಳಿಸಿಕೊಟ್ಟರು. ಅದು ಗಾಂಧೀಜಿಯ ಸಂದೇಶವಾಗಿತ್ತು, ಸತ್ಯಾಗ್ರಹದ ಅಸಾಂಪ್ರದಾಯಿಕ, ಆದರೆ ಪ್ರಬಲವಾದ, ಸಾಧನವಾಗಿತ್ತು. ಹದಿನಾಲ್ಕು ವರ್ಷ ವಯಸ್ಸಿನ ವಿಮಲ್ ಸರ್ದೇಸಾಯಿಯನ್ನು ಸ್ವಾತಂತ್ರ್ಯ ಚಳವಳಿಯತ್ತ ಸೆಳೆದಿದ್ದು ಈ ಅನುಭವ. ವಿಮಲ್ ಹೇಳುತ್ತಾರೆ : "ಇದು ಘಟಿಸಿದ್ದು 1929 ಅಥವಾ 1930ರಲ್ಲಿ. ಆಗಲೇ ನಾನು ಸತ್ಯಾಗ್ರಹ ಚಳವಳಿಗೆ ಧುಮುಕಲು ನಿರ್ಧರಿಸಿದೆ."

ಮಹಾರಾಷ್ಟ್ರದ ರತ್ನಗಿರಿ ಜಿಲ್ಲೆಯ ಪ್ರಧಾನವಲ್ಲಿ ಎಂಬ ಹಳ್ಳಿಯಲ್ಲಿ ವಿಮಲ್ ಜನಿಸಿದ್ದು 1915ರಲ್ಲಿ. ನಂತರದ ದಿನಗಳಲ್ಲಿ ಅವರು ಸ್ಮರಿಸಿಕೊಂಡಂತೆ, "ಅದೊಂದು ಚಿಕ್ಕ ಹಿಂದುಳಿದ, ಗ್ರಾಮ. ಹತ್ತಿರದ ಇಂದ್ರಾಯಣಿ ನದಿಯಿಂದ ನಾವು ನೀರನ್ನು ತಂದುಕೊಳ್ಳಬೇಕಾಗುತ್ತಿತ್ತು. ಆ ಹಳ್ಳಿಯಲ್ಲಿ ಶಾಲೆ ಇರಲಿಲ್ಲ. ಪ್ರಧಾನವಲ್ಲಿ ಹಿಂದುಳಿದ ಗ್ರಾಮವಾದರೆ, ಅದಕ್ಕೆ ಭಿನ್ನವಾದ ವಾತಾವರಣ ವಿಮಲ್ ಅವರ ಮನೆಯದು. ಮಹಾರಾಷ್ಟ್ರದಲ್ಲಿ ಆಗ್ಗೆ ಗಾಢವಾಗಿ ಹಬ್ಬಿಕೊಂಡಿದ್ದ ಸಮಾಜ ಸುಧಾರಣಾ ಚಳವಳಿಯ ಪ್ರಗತಿಪರ ಧ್ಯೇಯಗಳು ಇವರ ಮನೆಯಲ್ಲಿ ಹಾಸುಹೊಕ್ಕಾಗಿ ಬೆಳೆದಿದ್ದವು. ಆ ಚಳವಳಿಯ ಮೌಲ್ಯಗಳು ಇಡೀ ಅವಿಭಕ್ತ ಕುಟುಂಬವನ್ನು ಪ್ರಭಾವಿಸಿದ್ದವು. ಸ್ತ್ರೀ ಶಿಕ್ಷಣದ ಅವಶ್ಯಕತೆಯ ಬಗೆಗಿನ ಗಟ್ಟಿಯಾದ ನಂಬಿಕೆಯು ಆ ಮೌಲ್ಯಗಳ ಭಾಗವಾಗಿತ್ತು. ರಾಜಕೀಯವಾಗಿ ವಿಮಲ್ ಕುಟುಂಬದವರು ಕಾಂಗ್ರೆಸ್ ಪಕ್ಷದ ಬೆಂಬಲಿಗರಾಗಿದ್ದರು. ವಿಮಲ್‌ರ ತಂದೆ ಅನಂತ ಸರ್ದೇಸಾಯಿ ವೃತ್ತಿಯಲ್ಲಿ ಇಂಜಿನಿಯರ್ ಆಗಿದ್ದು, ಬಹುದೇಕ ದೆಹಲಿಯಲ್ಲಿ ವೃತ್ತಿಯ ಕಾಲವನ್ನು ಕಳೆದರು. ತಮ್ಮ ವರಮಾನದ ಒಂದು ಗಣನೀಯ ಭಾಗವನ್ನು ಮಗಳು ವಿಮಲ್ ಹಾಗೂ ಅವರ ವಿಶಾಲ ಕುಟುಂಬದ ಇತರ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಮೀಸಲಿಡಲು ಅವರು ತೀರ್ಮಾನಿಸಿದ್ದರು. ಹಾಗೆ ನೋಡಿದರೆ, ಹಳ್ಳಿಯ ಅಪಾರ ಸಂಖ್ಯೆಯ ಮಕ್ಕಳೆಲ್ಲರಿಗೂ ವಿದ್ಯಾಭ್ಯಾಸ ನೀಡಬೇಕೆಂಬುದು ಅವರ ಆಶಯವಾಗಿತ್ತು. ಅದಕ್ಕಾಗಿ ಅವರು ಒಂದು ದೊಡ್ಡ ಕಟ್ಟಡವನ್ನು ಬಾಡಿಗೆಗೆ ಹಿಡಿದರು. ಅದು ಒಂದರ್ಥದಲ್ಲಿ ಅವರ ಜ್ಞಾನ ದೇಗುಲವೆನಿಸಿದ ವಸತಿಶಾಲೆಯಾಗಿತ್ತು. ಅದಕ್ಕೆ ಅವರೇ ಉಪಾಧ್ಯಾಯರನ್ನು ನೇಮಿಸಿದರು. ವಸತಿ ಶಾಲೆಯಲ್ಲಿದ್ದ 15 ಮಕ್ಕಳನ್ನು ನೋಡಿಕೊಳ್ಳುವಂತಹ ಒಬ್ಬ ವಿಧವೆ ದಾದಿ ಸಹ ಉಪಾಧ್ಯಾಯರಲ್ಲಿ ಒಬ್ಬರು. ಶಾಲೆಯಲ್ಲಿದ್ದ ಹುಡುಗಿಯೆಂದರೆ ವಿಮಲ್ ಒಬ್ಬಳೇ. ಸುಮಾರು ಹತ್ತು ವರ್ಷ ವಯಸ್ಸಿನವರೆಗೆ ಆ ಶಾಲೆಯಲ್ಲಿ ಅವಳು ವ್ಯಾಸಂಗ ಮಾಡಿದಳು. ಮನೆಯಿಂದ ದೂರವಿದ್ದ ವಿಮಲಳ ತಾಯಿ ಮಾಲತಿ ಮಗಳ ವಿದ್ಯಾಭ್ಯಾಸಕ್ಕೆ ಸಂಪೂರ್ಣ ಬೆಂಬಲ ನೀಡಿದರು. ಯಾರಾದರೂ ವಿಮಲಳ ಮದುವೆಯ ಪ್ರಸ್ತಾಪ ತಂದರೆ ಅದನ್ನು ತಾಯಿ ತಳ್ಳಿಹಾಕಿಬಿಡುತ್ತಿದ್ದರು. "ನಿನಗೆ ಇಷ್ಟವಾದವರನ್ನು ನೀನು ಮದುವೆ ಮಾಡಿಕೊ" ಎಂದು ಮಗಳಿಗೆ ಹೇಳುತ್ತಿದ್ದರು.

ವಿಮಲಳಿಗೆ ಇನ್ನೂ ಹತ್ತು ವರ್ಷವಿದ್ದಾಗಲೇ ತಂದೆ ಅನಂತ ಸರ್ದೇಸಾಯಿ ತೀರಿಕೊಂಡರು. ತಾಯಿ ನಾಲ್ಕು ಮಕ್ಕಳನ್ನು ಸಂಭಾಳಿಸುವ ಹೊಣೆ ಹೊತ್ತಿದ್ದರು. ವಿಮಲಳೇ ಎಲ್ಲರಿಗಿಂತ ದೊಡ್ಡವಳು. ಅವಳಿಗೆ ಇಬ್ಬರು ತಮ್ಮಂದಿರು ಮತ್ತು ಒಬ್ಬ ತಂಗಿ. ಕುಟುಂಬವನ್ನು ಸಲಹುವ ಮತ್ತು ಶಿಕ್ಷಣವನ್ನು ಕೊಡಿಸುವ ಜವಾಬ್ದಾರಿಯನ್ನು ನಿರ್ವಹಿಸಲು ಚಿಕ್ಕಪ್ಪ ಗಣೇಶ ಸರ್ದೇಸಾಯಿ ಇದ್ದರು. ಅವರೊಡನೆ ವಿಮಲ್ ಮುಂಬೈಗೆ ಬಂದಿಳಿದಳು. ತಾಯಿ ಮಾತ್ರ ಹಳ್ಳಿಯಲ್ಲೇ ಉಳಿದುಕೊಂಡರು. ವಿಮಲ್ ಮೆಟ್ರಿಕ್ಯುಲೇಶನ್ ತರಗತಿಗೆ ಬಂದ ವರ್ಷ ಚಿಕ್ಕಪ್ಪ ಅವಳನ್ನು ಪುಣೆಯ ಬಳಿಯ ಹಿಂಗಣೆಯಲ್ಲಿರುವ ಕರ್ವೆ ಆಶ್ರಮಕ್ಕೆ ಕಳಿಸಿದರು.

ಸ್ವಾತಂತ್ರ್ಯ ಚಳವಳಿಗೆ ತಾನೂ ಏನಾದರೂ ಮಾಡಬೇಕೆಂಬ ಅಚಲ ಶ್ರದ್ಧೆ ಶಾಲೆಯಲ್ಲಿದ್ದಾಗಲೇ ವಿಮಲಳಲ್ಲಿ

ಮೂಡಿಬಂದಿತ್ತು, ಇದು ಅವಳ ಮನಸ್ಸನ್ನು ಸಂಪೂರ್ಣವಾಗಿ ಆವರಿಸಿ ಭಾವಪರವಶವಳನ್ನಾಗಿಸಿತ್ತು. ಗಾಂಧೀಜಿಯ ಭೇಟಿ ಪ್ರಸಂಗವು ಅವಳ ನಿರ್ಧಾರಕ್ಕೆ ಒಂದು ಹಾದಿಯನ್ನು ತೋರಿಸಿತು. ಕಾಂಗ್ರೆಸ್‌ನ ಸ್ವಯಂಸೇವಾ ವಿಭಾಗವಾದ ಸೇವಾದಳಕ್ಕೆ ಅವಳು ದಾಖಲಾದಳು. ಆಗ್ಗೆ ಕಾಂಗ್ರೆಸ್ ಬೃಹತ್ತಾದ ಒಂದು ಸತ್ಯಾಗ್ರಹ ಚಳವಳಿಯನ್ನು ಆರಂಭಿಸಿತ್ತು. ಜನರಲ್ಲಿ ಒಂದು ಅಪೂರ್ವವಾದ ಹುಮ್ಮಸ್ಸನ್ನು ತುಂಬಿ ಅವರನ್ನೆಲ್ಲಾ ಚಳವಳಿಯಲ್ಲಿ ಭಾಗವಹಿಸುವಂತೆ ಮಾಡಲು ಸಮರ್ಥವಾದ ಚಳವಳಿ ಇದಾಗಿದ್ದಿತು. ವಿಮಲ್ ಮತ್ತವಳ ಸ್ನೇಹಿತೆಯರು ಬಿಳಿಯ ಸೀರೆಯನ್ನುಡಲಾರಂಭಿಸಿದರು. ಬಿಳಿಯು ದೇಶಭಕ್ತಿಯ ಸಂಕೇತವಾದಂತಿತ್ತು. ಮುಂದೊಮ್ಮೆ ವಿಮಲ್ ಹೇಳಿದಂತೆ, ''ಆ ಕಾಲದಲ್ಲಿದ್ದ ದೇಶಭಕ್ತಿಯ ಕಾವಿನ ಪರಿಮಾಣವನ್ನು ಈಗ ಯಾರೂ ಸಂಪೂರ್ಣವಾಗಿ ಗ್ರಹಿಸಲಾರರು. ಚಿಕ್ಕ ಚಿಕ್ಕ ಗುಂಪುಗಳಲ್ಲಿ ಹೋಗಿ ನಾವು ವಿವಿಧ ಶಾಲೆಗಳಿಂದ ವಿದ್ಯಾರ್ಥಿಗಳನ್ನು ಹೊರಕ್ಕೆ ಬರುವಂತೆ ಪ್ರೇರೇಪಿಸುತ್ತಿದ್ದೆವು. ಎಷ್ಟೋ ವೇಳೆ ಶಾಲೆಯ ಆವರಣದಿಂದ ನಮ್ಮನ್ನು ಹೊರಹಾಕುತ್ತಿದ್ದುದೇ ಹೆಚ್ಚು. ಕೇವಲ ವಿದ್ಯಾರ್ಥಿಗಳಲ್ಲ, ಸಾರ್ವಜನಿಕರು ಸಹ ಸಹಸ್ರ ಸಂಖ್ಯೆಯಲ್ಲಿ ಪ್ರತಿಭಟನೆ ಸಲ್ಲಿಸಲು ಬೀದಿಗಿಳಿಯುತ್ತಿದ್ದರು.''

ತನ್ನ 14 ಅಥವಾ 15ನೇ ವಯಸ್ಸಿನಲ್ಲಿ ವಿಮಲ್ ಮೊಟ್ಟಮೊದಲ ಜೈಲಿನ ಅನುಭವ ಪಡೆದಳು. ಅದಾದದ್ದು 1930ರಲ್ಲಿ. ಅವರೇ ಹೇಳಿದಂತೆ, ''ಸೇವಾದಳದ ಸ್ವಯಂ ಸೇವಕಿಯಾಗಿ ನನಗೆ ವಹಿಸಲಾಗಿದ್ದ ಕೆಲಸವೆಂದರೆ ವಿದೇಶಿ ಮಾಲುಗಳನ್ನು ಮಾರುವ ಅಂಗಡಿಗಳಿಗೆ ಗ್ರಾಹಕರು ಹೋಗದಂತೆ ನಿರ್ಬಂಧಿಸುವುದು. ನನ್ನೊಡನೆ ಇನ್ನೂ ಹಲವರಿರುತ್ತಿದ್ದರು.'' ತನ್ನ ಜವಾಬ್ದಾರಿಯನ್ನು ವಿಮಲ್ ಬಹಳ ಗಂಭೀರವಾಗಿ ತೆಗೆದುಕೊಂಡಳು. ವಿಮಲ್‌ಳ ನೇತೃತ್ವದಲ್ಲಿ ಸೇವಾದಳದ ಸ್ವಯಂಸೇವಕರು ಒಂದು ಚಿಕ್ಕ ಗುಂಪಿನಲ್ಲಿ ಬರುತ್ತಿದ್ದುದನ್ನು ಗಮನಿಸುತ್ತಿದ್ದಂತೆಯೇ ಅಂಗಡಿಯ ಮಾಲಿಕರು ಕೂಡಲೆ ಬಾಗಿಲುಗಳನ್ನು ಮುಚ್ಚಿಬಿಡುತ್ತಿದ್ದರು ; ಅವರು ಹೊರಟುಹೋದ ನಂತರ ಗುಟ್ಟಾಗಿ ಮತ್ತೆ ಬಾಗಿಲು ತೆರೆಯುತ್ತಿದ್ದರು. ವಿಮಲ್, ಅವಳ ಸ್ನೇಹಿತೆ ಕುಸುಮ್ ಕಿರ್‌ಕೆರೆ ಹಾಗೂ ಸೇವಾದಳ ತಂಡದ ಇತರರು ಅಂತಹ ಒಬ್ಬ ಅಂಗಡಿಯ ಮಾಲಿಕನನ್ನು ಅವನ ಅರಿವಿಗೆ ಬಾರದಂತೆ ಹಿಡಿಯಲು ಒಮ್ಮೆ ನಿರ್ಧರಿಸಿದರು. ಮುಚ್ಚಿದ ಬಾಗಿಲನ್ನು ಅವನು ತೆರೆಯುತ್ತಿದ್ದಂತೆಯೇ ಆ ಗುಂಪು ಕಾರಿನಲ್ಲಿ ಹಿಂದಿರುಗಿ ಅವನ ಅಂಗಡಿಗೆ ಬರುವ ಗ್ರಾಹಕರನ್ನು ತಡೆಯಲು ಉಪಕ್ರಮಿಸಿತು. ಕೂಡಲೆ ಪೊಲೀಸರು ಅವರನ್ನೆಲ್ಲಾ ಸುತ್ತುವರಿದರು, ಬಂಧಿಸಿದರು ಮತ್ತು ಪೊಲೀಸ್ ವಾಹನಗಳಲ್ಲಿ ಕೊಂಡೊಯ್ದರು. ವಿಮಲ್ ಹೇಳುತ್ತಾರೆ : ''ನಮ್ಮ ವಾಹನವನ್ನು ಜನ ಸುತ್ತುವರಿದು, ಘೋಷಣೆಗಳನ್ನು ಕೂಗುತ್ತಿದ್ದರು ಮತ್ತು ನಮ್ಮತ್ತ ಹೂವಿನ ಮಳೆ ಸುರಿಸುತ್ತಿದ್ದರು. ಅದೆಂಥಾ ಅನುಭವವೆಂದು ನೀವು ಊಹಿಸಲಾರಿರಿ, ಅಂತಹ ಸಂಗತಿಗಳನ್ನು ನೀವಿಂದು ಕಾಣಲಾರಿರಿ.'' ದಸ್ತಗಿರಿಗೊಳಗಾದವರನ್ನೆಲ್ಲಾ ಪೊಲೀಸರು ನ್ಯಾಯಾಲಯಗಳ ಮುಂದೆ ಹಾಜರುಪಡಿಸಿದರು. ದಸ್ತೂರ್ ಎಂಬೊಬ್ಬ ದುರಹಂಕಾರಿ ಮ್ಯಾಜಿಸ್ಟ್ರೇಟನು ಕ್ಷಮಾಪಣೆ ಕೇಳಲು ಹುಡುಗಿಯರಿಗೆ ಆದೇಶಿಸಿದ ; ಇಲ್ಲವಾದರೆ ಕಾರಾಗೃಹ ವಾಸ ಖಚಿತವೆಂದು ಪ್ರಕಟಿಸಿದ. ವಿಮಲ್ ಮತ್ತು ಕುಸುಮ್ ಕ್ಷಮೆ ಕೇಳಲು ನಿರಾಕರಿಸಿದರು. ತಾನು ಮಾಡಿದ್ದುದರ ಬಗ್ಗೆ ತನಗೆ ಹೆಮ್ಮೆ ಇದ್ದುದಾಗಿಯೂ, ತಾನು ಜೈಲಿಗೆ ಹೋಗಲು ಅಂಜುವುದಿಲ್ಲವೆಂದೂ ವಿಮಲ್ ಧೈರ್ಯವಾಗಿ ಮ್ಯಾಜಿಸ್ಟ್ರೇಟನಿಗೆ ಹೇಳಿದಳು. ವಿಮಲ್ ಹೇಳುತ್ತಾರೆ : ''ಆ ಬಂಧನದ ಬಗೆಗಿನ ಪತ್ರಿಕಾ ವರದಿಯ ತುಣುಕು ನನ್ನ ಮಗ ಉದಯನ ಬಳಿ ಈಗಲೂ ಇದೆ. ಬಂಧಿಸಲ್ಪಟ್ಟ ಸೇವಾದಳದ ಸ್ವಯಂ ಸೇವಕರ ಪೈಕಿ ಅತಿಕಿರಿಯಳಾಗಿದ್ದ 14 ವರ್ಷದ ವಿಮಲ್ ಸರ್ದೇಸಾಯಿಗೆ ಕಠಿಣ ಸಜೆ ವಿಧಿಸಲಾಯಿತೆಂದು ಆ ವರದಿ ತಿಳಿಸುತ್ತದೆ.''

ಪೂನಾದ ಯೆರವಾಡಾ ಜೈಲಿಗೆ ಅವರನ್ನೆಲ್ಲಾ ಕೊಂಡೊಯ್ಯಲಾಯಿತು. ಆಗ್ಗೆ ಅಲ್ಲಿ ಸರೋಜಿನಿ ನಾಯ್ಡು ಮತ್ತು ಕಮಲಾದೇವಿ ಚಟ್ಟೋಪಾಧ್ಯಾಯ ಸಹ ಬಂಧನದಲ್ಲಿದ್ದರು. ಅವರಿದ್ದುದು 'ಎ' ವರ್ಗದ ಕೈದಿಗಳಾಗಿ. ವಿಮಲ್ ಮತ್ತು ಅವಳ ಸ್ನೇಹಿತರಾದರೋ 'ಸಿ' ವರ್ಗಕ್ಕೆ ಸೇರಿದ್ದವರು. ಆರು ತಿಂಗಳ ಕಾಲ ಅವರು ಜೈಲಿನಲ್ಲಿರಬೇಕಾಯಿತು. 1931ರಲ್ಲಿ ಗಾಂಧಿ-ಇರ್ವಿನ್ ಒಪ್ಪಂದವಾದಾಗ ಅವರನ್ನು ಬಿಡುಗಡೆ ಮಾಡಲಾಯಿತು.

ಅಸಹಕಾರ ಚಳವಳಿಯನ್ನು ಗಾಂಧೀಜಿ ಹಿಂತೆಗೆದುಕೊಂಡರು. ಇದು ವಿಮಲ್‌ಳಲ್ಲಿ ಕಾಂಗ್ರೆಸ್ ಮತ್ತು ಗಾಂಧಿವಾದದ ಬಗ್ಗೆ ಭ್ರಮನಿರಸನದ ಮೊದಲ ಬೀಜಗಳನ್ನು ಬಿತ್ತಿತು. ಆದಾಗ್ಯೂ, ಸ್ವಾತಂತ್ರ್ಯ ಹೋರಾಟಕ್ಕೆ ಅರ್ಥವತ್ತಾದ ಕೊಡುಗೆ ನೀಡಲು ಅವಳ ಮನಸ್ಸು ಹಾತೊರೆಯುತ್ತಿತ್ತು ಮತ್ತು ಅದಕ್ಕಾಗಿ ದಾರಿಯ ಹುಡುಕಾಟದಲ್ಲಿ ವಿಮಲ್ ತೊಡಗಿದ್ದಳು. ಸ್ನೇಹಿತರೊಡಗೂಡಿ ಈ ದ್ವಂದ್ವದ ಬಗ್ಗೆ ನಿರಂತರವಾದ ಚರ್ಚೆ ನಡೆಸುತ್ತಿದ್ದರು. ಒಮ್ಮೆ ಸ್ನೇಹಿತನೊಬ್ಬ

ವಿನಾಯಕ ದಾಮೋದರ ಸಾವರ್ಕರ್ ಅವರನ್ನು ಭೇಟಿಯಾಗುವಂತೆ ಸಲಹೆ ನೀಡಿದ. ಅವರು ನಿರ್ದಿಷ್ಟವಾದ ತಿಳಿವಳಿಕೆ ನೀಡುವುದು ಖಚಿತವೆಂದೂ ಹೇಳಿದ. ವಿಮಲ್ ಮತ್ತವಳ ಗೆಳತಿ ದೋಣಿಯಲ್ಲಿ ರತ್ನಗಿರಿಗೆ ಹೊರಟರು. ಆಗೊ ಬ್ರಿಟಿಷರು ಸಾವರ್ಕರರನ್ನು ಗೃಹಬಂಧನದಲ್ಲಿರಿಸಿದ್ದರು. ಹದಿನಾರು ವರ್ಷದ ಈ ಇಬ್ಬರು ಗಟ್ಟಿಮನಸ್ಸಿನ ಹುಡುಗಿಯರನ್ನು ನೋಡಿ, ಅವರ ಹುಮ್ಮಸ್ಸನ್ನು ಗಮನಿಸಿ, ಸಾವರ್ಕರ್ ಅವಾಕ್ಕಾದರು. ವಿಮಲ್‌ದೀ ನಂತರದ ಕಾಲದಲ್ಲಿ ನೆನಪಿಸಿಕೊಳ್ಳುತ್ತಿದ್ದುದುಂಟು : ಕಾಂಗ್ರೆಸ್ ಮತ್ತು ಸ್ವಾತಂತ್ರ್ಯ ಪಡೆಯಲು ಅದರ ಅಸಾಮರ್ಥ್ಯವನ್ನು ಕುರಿತಂತೆ ನನ್ನ ನಿರಾಸೆಯನ್ನು ಅವರಿಗೆ ಹೇಳಿದೆ. ಅದರಿಂದಾಗಿ ಅವರ ಮಾರ್ಗದರ್ಶನ ಪಡೆಯಲು ಬಂದಿರುವುದಾಗಿ ತಿಳಿಸಿದೆ. ಮೊದಲಿಗೆ ಅವರು ನಕ್ಕುಬಿಟ್ಟರು. ಈ ಹುಚ್ಚು ಹುಡುಗಿಯರ ಸಾಹಸ ಅವರಿಗೆ ಅಚ್ಚರಿ ತಂದಿರಬೇಕು. ನಾವು ಮಾಡಿದ್ದುದನ್ನು ಮೆಚ್ಚಿಕೊಳ್ಳುತ್ತಲೇ ನಮ್ಮ ವಿದ್ಯಾಭ್ಯಾಸವನ್ನು ಮೊದಲು ಮುಗಿಸಿಕೊಳ್ಳಬೇಕೆಂದೂ ಆಮೇಲೆ ಅವರನ್ನು ಕಾಣಲು ಬರಬೇಕೆಂದೂ ಅವರು ಹೇಳಿದರು. ನನ್ನ ಚಿಕ್ಕಪ್ಪನ ಮಗ ಶ್ರೀನಿವಾಸನಿಗೆ ನಾವು ಸಾವರ್ಕರರನ್ನು ಕಾಣಲು ಹೋಗಿದ್ದು ಸರಿಬೀಳಲಿಲ್ಲ, ಅವನಾಗಲೇ ಕಮ್ಯುನಿಸ್ಟ್ ಆಗಿದ್ದ.''

ಇದಾದ ಕೆಲವೇ ದಿನಗಳ ನಂತರ ವಿಮಲ್ ಗಾಂಧೀಜಿ ರಾಜಕೀಯದಿಂದ ಸಂಬಂಧ ಮುರಿದುಕೊಂಡು ಬೇರೆ ಹಾಡಿ ಹಿಡಿದರು. ಆದರೆ ಸ್ವತಃ ಗಾಂಧೀಜಿಗೆ ಪ್ರಿಯವಾಗಿದ್ದ ಮಾನವೀಯತೆ ಮತ್ತು ಸರಳತೆಯ ಮೌಲ್ಯಗಳನ್ನು ಕೈಬಿಡದೆ ಮುಂದುವರಿಸಿದರು. ಗಾಂಧೀಜಿಯ ರಾಜಕೀಯ ಚಿಂತನೆಯು ಸ್ವಾತಂತ್ರ್ಯ ಚಳವಳಿಯು ಎತ್ತಿದ್ದ ಕೆಲವು ಪ್ರಮುಖ ಪ್ರಶ್ನೆಗಳನ್ನು ಸಮಾಧಾನಕರವಾಗಿ ಉತ್ತರಿಸಲಿಲ್ಲವೆಂದು ವಿಮಲ್‌ಗೆ ಖಚಿತವಾಯಿತು. ಈ ಪ್ರಶ್ನೆಗಳು ಅವರನ್ನು ಅವಿತರವಾಗಿ ಕಾಡುತ್ತಿದ್ದವು. ಕಾಂಗ್ರೆಸ್ ಪಕ್ಷವು ಎಂತಹ ಸ್ವಾತಂತ್ರ್ಯಕ್ಕೆ ಹೋರಾಡುತ್ತಿದೆ ? ಕಾಂಗ್ರೆಸ್ ಪಕ್ಷವು ನಿರೀಕ್ಷಿಸುವ ಸ್ವತಂತ್ರ ಭಾರತದಲ್ಲಿ ದುಡಿಯುವ ಜನ ಎಷ್ಟು ಸ್ವತಂತ್ರರಾಗಿರುತ್ತಾರೆ ? ವಸಾಹತುಶಾಹಿ ದಮನವಲ್ಲದೆ ಭಾರತದ ಜನತೆ ಎದುರಿಸುತ್ತಿರುವ ಬೇರೆ ದಮನಗಳಿಗೆ ಉತ್ತರವೇನು ? ನಮ್ಮ ದೇಶವು ಮುಕ್ತಗೊಳಿಸಬೇಕಾಗಿರುವ ಬೇರೆ ವಿಷಯಗಳು ಹತ್ತಾರು : ಬಡತನ, ಹಸಿವು, ಅನಕ್ಷರತೆ, ಊಳಿಗಮಾನ್ಯ ಪದ್ಧತಿ ಮತ್ತು ಜಾತೀಯತೆ, ಕೋಮುವಾದಿ ಪೂರ್ವಾಗ್ರಹಗಳು ಮತ್ತು ಲಿಂಗ ತಾರತಮ್ಯ ; ಒಂದೇ, ಎರಡೇ ? ಅದಕ್ಕಾಗಿ ಹೋರಾಟದ ನಾಯಕತ್ವ ನೀಡುವವರು ಯಾರು ? ಮೊದಲಿನಿಂದಲೂ ಅವರನ್ನು ಆಕರ್ಷಿಸಿದ್ದ ರಾಜಕೀಯ ಕ್ರಿಯಾಶಾಲಿತ್ವವು ಈಗ ವಿಮಲ್‌ಳನ್ನು ಬಡವರ ಮತ್ತು ದುಡಿಯುವ ಜನರ ಸಮಸ್ಯೆಗಳ ಪರಿಹಾರಕ್ಕಾಗಿ ಮಾರ್ಕ್ಸ್‌ವಾದದತ್ತ ಸೆಳೆಯಿತು. ಮುಂಬೈಯಲ್ಲಿ ಆಗ ತಾನೆ ಗರಿ ಕೆದರುತ್ತಿದ್ದ ಕಮ್ಯೂನಿಸ್ಟ್ ಪಕ್ಷದತ್ತ ವಿಮಲ ಚಲಿಸಿದರು. ಮುಂಬೈನ ಕಾರ್ಮಿಕ ವರ್ಗದ ನಡುವೆ ಈ ಪಕ್ಷವು ಸ್ವಲ್ಪ ಮಟ್ಟಿನ ತಳಹದಿಯನ್ನು ಆಗಲೇ ರಚಿಸಿಕೊಂಡಿತ್ತು.

ಸಾವರ್ಕರರನ್ನು ಭೇಟಿಯಾದ ನಂತರ ವಿಮಲ್ ಮತ್ತು ಕುಸುಮ್ ಶಾಲೆಗೆ ಹಿಂದಿರುಗಲು ತೀರ್ಮಾನಿಸಿದರು. ಪುಣೆಯ ಹಿಂಗಣೆ ಶಾಲೆಯಲ್ಲಿ ವಿಮಲ್ ಮೆಟ್ರಿಕ್ಯುಲೇಶನ್ ಮುಗಿಸಿದರು. ಅವರು ಶಾಲೆಯಲ್ಲಿ ಕಡೆಯ ವರ್ಷದಲ್ಲಿದ್ದಾಗ ತಾಯಿ ಮಾಲತಿ ತೀರಿಕೊಂಡರು. ವಿದ್ಯಾರ್ಥಿನಿಯರ ಪೈಕಿ ವಿಮಲ್ ಮೆಟ್ರಿಕ್ಯುಲೇಶನ್ ಪರೀಕ್ಷೆಯಲ್ಲಿ ಮೊದಲ ಸ್ಥಾನ ಪಡೆದಿದ್ದಳು. ಪುಣೆಯ ಯೇರಂಡವನದಲ್ಲಿ ಕರ್ವೆ ವಿಶ್ವವಿದ್ಯಾನಿಲಯವನ್ನು ಪ್ರವೇಶಿಸಿದಾಗ ಕಾಲೇಜಿನಲ್ಲಿ ಸಹ ವಿಮಲ್ ವ್ಯಾಸಂಗದಲ್ಲಿ ಚತುರತೆಯನ್ನು ಮುಂದುವರಿಸಿದರು. ಆಕೆ ಒಳ್ಳೆಯ ಆಟಗಾರ್ತಿಯಾಗಿದ್ದುದಲ್ಲದೆ ನಾಟ್ಯ, ನಟನೆ, ಮುಂತಾದ ಸಾಂಸ್ಕೃತಿಕ ಚಟುವಟಿಕೆಗಳಲ್ಲೂ ಸಕ್ರಿಯ ಪಾತ್ರ ವಹಿಸುತ್ತಿದ್ದರು. ಸಂಸ್ಕೃತ ಅವರ ಪ್ರಮುಖ ವಿಷಯ ; ಇತಿಹಾಸ ಮತ್ತು ಚಿತ್ರಕಲೆ ಜೊತೆಯ ವಿಷಯಗಳು. ನಂತರದ ದಿನಗಳಲ್ಲಿ ಅವರೆನ್ನುತ್ತಿದ್ದರು : ''ನಾನು ಯಾವಾಗಲೂ ಬಹಿರ್ಮುಖಳು ; ಎಲ್ಲದರಲ್ಲೂ ಮುಂದೆ ಇರಬಯಸುವವಳು. ಮುಂಬೈನಲ್ಲಿ ಭಾರತ ಮತ್ತು ಆಸ್ಟ್ರೇಲಿಯಾ ನಡುವೆ ಮೊದಲ ಪಂದ್ಯವು ನಡೆದಾಗ ನಾನು ಆಟ ನೋಡಲು ಎಷ್ಟು ಉತ್ಸುಕಳಾಗಿದ್ದೆನೆಂದು ನೆನಪು ನನಗಿದೆ. ನನಗೆ ಆಗ ಕ್ರಿಕೆಟ್‌ನ ಅ-ಆ-ಇ-ಈ ಸಹ ತಿಳಿದಿರಲಿಲ್ಲ, ನಾವು ಇಬ್ಬರು ಮೂವರು ವಿದ್ಯಾರ್ಥಿನಿಲಯದ ಮೇಲ್ವಿಚಾರಕರ ಅಪ್ಪಣೆ ಪಡೆದು ಪುಣೆಯಿಂದ ಮುಂಬೈಗೆ ಬಂದೆವು. ಪಂದ್ಯ ನೋಡುವುದು, ಭಾರತದ ತಂಡಕ್ಕೆ ಜಯಕಾರ ಹಾಕುವುದು ನಮ್ಮ ಆಶಯ. ಆ ಕತೆಯನ್ನು ಈಗಲೂ ನನ್ನ ಮೊಮ್ಮಕ್ಕಳಿಗೆ ಹೇಳುತ್ತಿರುತ್ತೇನೆ'' ಇದನ್ನು ಹೇಳುವಾಗ ಅವರಿಗೇ ನಗು !

ವಿಮಲ್ ಪದವಿ ಪಡೆದು ಕೆಲಸ ಹುಡುಕಲಾರಂಭಿಸಿದರು. ತಂಗಿ ಮತ್ತು ತಮ್ಮ ಇಬ್ಬರನ್ನೂ ಸಲಹಬೇಕಾದ ವಿಶೇಷ ಜವಾಬ್ದಾರಿ ಅವರ ಮೇಲಿದ್ದಿತು. ಅವರ ಮೊದಲ ಉದ್ಯೋಗ ಶಾಲಾ ಅಧ್ಯಾಪಕಿಯಾಗಿ, ಮುಂಬೈನ ಕಿಂಗ್ ಜಾರ್ಜ್ ಪ್ರೌಢಶಾಲೆಯಲ್ಲಿ ಅವರು ಸಂಸ್ಕೃತ, ಇಂಗ್ಲಿಷ್, ಮರಾಠಿ ಮತ್ತು ಚರಿತ್ರೆಯಲ್ಲಿ ಐದು ಮತ್ತು ಆರನೆಯ

ತರಗತಿಗಳಿಗೆ ಬೋಧಿಸುತ್ತಿದ್ದರು. ಇದು ಹಂಗಾಮಿ ಕೆಲಸ ; ಆದ್ದರಿಂದ ಬೇಗನೇ ಅವರು ಅದನ್ನು ಬಿಡಬೇಕಾಗಿಬಂತು. ಆಮೇಲೆ ಅವರು ಗಿರ್ಗಾಂವ್‌ನ ಶಾರದಾ ಆಶ್ರಮದಲ್ಲಿ ಬೋಧಿಸುತ್ತಿದ್ದರು. ಆಗ್ಗೆ ಅವರ ವಯಸ್ಸು ಇನ್ನೂ ಹದಿನೆಂಟು.

ಕಾಂಗ್ರೆಸ್ ಬಗ್ಗೆ ಅವರಿಗೆ ಎಷ್ಟೇ ಅನುಮಾನಗಳಿದ್ದರೂ ತಮ್ಮ ಶಾಲಾ-ಕಾಲೇಜು ದಿನಗಳಲ್ಲಿನ್ನೂ ವಿಮಲ್ ಕಾಂಗ್ರೆಸ್ಸಿನ ಅನುಯಾಯಿಯಾಗಿ ಉಳಿದಿದ್ದರು. ತನ್ನ ಸೋದರ ಸಂಬಂಧಿ ಶ್ರೀನಿವಾಸ ಸರ್ದೇಸಾಯಿಯೊಡನೆ ಆಗಾಗ್ಗೆ ಬಿರುಸಿನ ಚರ್ಚೆಗಳನ್ನು ನಡೆಸುತ್ತಿದ್ದರು ; ಆತ ಆಗ್ಗೆ ಆಗಲೇ ಕಮ್ಯೂನಿಸ್ಟ್ ಪಕ್ಷದಲ್ಲಿದ್ದ. ವಿಮಲ್ ಹೇಳುತ್ತಾರೆ : "ಕಾಂಗ್ರೆಸ್ ಬೂರ್ಷ್ವಾ (ಬಂಡವಳಿಗ) ಪಕ್ಷವೆಂದು ಅವನು ಹೇಳುತ್ತಿದ್ದ; ಆದರೆ ಜನಸಮುದಾಯವು ಅವರೊಡನಿದ್ದುದರಿಂದ ಅದು ಬೂರ್ಷ್ವಾ ಪಕ್ಷವಲ್ಲವೆಂದು ನಾನು ಹೇಳುತ್ತಿದ್ದೆ."

ವಿಮಲ್ ಅವರು ಮಾರ್ಕ್ಸ್‌ವಾದವನ್ನು ಪ್ರವೇಶಿಸಿದ್ದು ಅವರ ಶ್ರೀನಿವಾಸ್ ಮುಖಾಂತರವೇ. ಆತ ಅವರಿಗೆ ಕಮ್ಯೂನಿಸ್ಟ್ ಸಾಹಿತ್ಯವನ್ನು ಪರಿಚಯಿಸಿದ. ಅಂತೆಯೇ ಮಕ್ಸೀಂ ಗೋರ್ಕಿಯ "ತಾಯಿ" ಮತ್ತು ಸ್ಪೇನಿನ ಪ್ರಖ್ಯಾತ ಕಮ್ಯೂನಿಸ್ಟ್ ನಾಯಕಿ ಡೊಲಾರಿಸ್ ಇಬರೂರಿ ಬಗೆಗಿನ ಒಂದು ಪುಸ್ತಕಕ್ಕೆ ಕೂಡ. ಡೊಲಾರಿಸ್‌ಗೆ "ಪ್ರೇಮಪೂರಿತ ಹೂವು" ಎಂಬ ಅಡ್ಡ ಹೆಸರಿದ್ದಿತು. ಶ್ರೀನಿವಾಸನೊಡನೆ ಹೋಗಿ ವಿಮಲ್ ಕೆಲವು ಕಮ್ಯುನಿಸ್ಟ್ ನಾಯಕರನ್ನು ಭೇಟಿಯಾದಳು. ಅವರೆಲ್ಲಾ ಸೇರಿ ಗಿರಣಿ ಕಾರ್ಮಿಕರ ಸಂಘ ಸ್ಥಾಪಿಸಿದ್ದರು ಮತ್ತು ಮುಂಬೈನ ಕಾರ್ಮಿಕ ವರ್ಗ ವಾಸಿಸುತ್ತಿದ್ದೆಡೆಗಳಲ್ಲಿ ಕೆಲಸ ಮಾಡುತ್ತಿದ್ದರು. ಅವರಲ್ಲಿ ಎಸ್.ಎಸ್. ಮೀರಜ್‌ಕರ್, ಕೆ.ಎನ್. ಭೋಗಳೇಕರ್, ಪಿ.ಬಿ. ರಾಂಗ್ನೇಕರ್, ಎಸ್.ವಿ. ದೇಶಪಾಂಡೆ, ಬಿ.ಟಿ. ರಣದಿವೆ, ಮೊದಲಾದವರೆಲ್ಲಾ ಇದ್ದರು. ಆ ಕಾಲದಲ್ಲಿ ಗೋದಾವರಿ ಪರುಲೇಕರ್ ಸಹ ಕಮ್ಯುನಿಸ್ಟ್ ಪಕ್ಷದ ಕಾರ್ಯಕರ್ತ ರಾಗಿದ್ದರು. ನಂತರದ ದಿನಗಳಲ್ಲಿ ವರ್ಲಿ ಆದಿವಾಸಿಗಳ ನಡುವೆ ಕೆಲಸ ಮಾಡಿ ಅವರು ಬಹಳ ಪ್ರಖ್ಯಾತರಾದರು. ಅಹಿಲ್ಯಾ ರಣದಿವೆ ಮತ್ತು ಪ್ರೇಮಾ ಓಕ್ ಕೂಡ ಇದ್ದರು. 1937ರ ಸ್ಥಾನಿಕ ಚುನಾವಣೆಗಳಲ್ಲಿ ವಿಮಲ್ ಕಮ್ಯುನಿಸ್ಟ್ ಅಭ್ಯರ್ಥಿಗಳ ಪರವಾಗಿ ಬಿರುಸಿನ ಪ್ರಚಾರ ಕೈಗೊಂಡರು. ಅದಕ್ಕಾಗಿ ನಗರದಲ್ಲೆಲ್ಲಾ ಸೈಕಲ್ಲಿನಲ್ಲಿ ಸುತ್ತಾಡುವುದು, ಕರಪತ್ರಗಳನ್ನು ಹಂಚುವುದು, ಬೀದಿಗಳ ಮೂಲೆ ಮೂಲೆಗಳಲ್ಲಿ ಸಭೆ ನಡೆಸುವುದು ಮತ್ತು ಪಕ್ಷದ ಪ್ರಕಟಣೆಗಳ ಮಾರಾಟ ಮಾಡುವುದು, ಹೀಗೆ ಎಲ್ಲವನ್ನೂ ಮಾಡ ಹೊರಟರು. ಅದೇ ವೇಳೆಯಲ್ಲಿ ಬಿ.ಟಿ. ರಣದಿವೆ ನಡೆಸುತ್ತಿದ್ದ ಮಾರ್ಕ್ಸ್‌ವಾದದ ತರಗತಿಗಳಿಗೆ ಹೋಗಲಾರಂಭಿಸಿದರು. ಆಗ್ಗೆ ಆಗಲೆ ಬಿ.ಟಿ. ರಣದಿವೆ ಖ್ಯಾತ ಕಮ್ಯೂನಿಸ್ಟರಾಗಿದ್ದರು ಮತ್ತು ನಂತರದ ದಿನಗಳಲ್ಲಿ ಅವರು ವಿಮಲ್ ಅವರನ್ನು ಮದುವೆಯಾದರು. ವಿಮಲ್ ಹೇಳುತ್ತಿದ್ದುದುಂಟು : "ಬಿಟಿಆರ್ ನಮ್ಮೆಲ್ಲರಿಗಿಂತಲೂ ಬಹಳ ಮುಂದು. ಅವರು ಅಧ್ಯಾಪಕರು ಮಾತ್ರವಲ್ಲದೆ ಕಾರ್ಮಿಕ ವರ್ಗದ ನಾಯಕರೂ ಆಗಿದ್ದರು. ಆ ವೇಳೆಗಾಗಲೆ ನಾನು ಕಮ್ಯೂನಿಸ್ಟರ ನಾಯಕತ್ವ ದಲ್ಲಿದ್ದ ಕಾರ್ಮಿಕ ವರ್ಗದ ಚಳವಳಿಯ ಭಾಗವಾಗಿಬಿಟ್ಟಿದ್ದೆ. ಕಾಂಗ್ರೆಸ್ಸನ್ನು ಬಿಟ್ಟು ನನ್ನನ್ನು ನಾನು ಕಮ್ಯೂನಿಸ್ಟ್ ಎಂದು ಪರಿಭಾವಿಸಿಕೊಂಡಿದ್ದೆ."

ಯುವತಿಯಾಗಿದ್ದಾಗ ವಿಮಲ್‌ರ ಜೀವನದಲ್ಲಿ ಇನ್ನೊಂದು ಸ್ವಾರಸ್ಯಕರವಾದ ಭಾಗವಿತ್ತು ; 1930ರ ದಶಕದ ಮಧ್ಯಭಾಗದ ಮುಂಬೈ ಚಲನಚಿತ್ರ ಪ್ರಪಂಚದಲ್ಲಿ ಅವರೊಬ್ಬ ನಟಿಯಾಗಿದ್ದರು. ಒಮ್ಮೆ ಗೆಳತಿಯೊಬ್ಬಳೊಡನೆ ಅವರು ಉದ್ಯೋಗ ಅರಸಿಕೊಂಡು ನಾಗಪುರಕ್ಕೆ ಹೋಗಿದ್ದರು. ಆಗ ಖ್ಯಾತ ಮರಾಠಿ ಲೇಖಕ ಮಾಮಾ ವಾರೇರ್ಕರ್ ಅವರಿಂದ ಒಂದು ಪತ್ರ ಬಂದಿತು : ಚಲನಚಿತ್ರವೊಂದರಲ್ಲಿ ಒಬ್ಬ ಸಾಮಾಜಿಕ ಕಾರ್ಯಕರ್ತೆಯ ಪಾತ್ರವನ್ನು ವಿಮಲ್‌ರಿಗೆ ಅವರು ನೀಡಬಯಸಿದ್ದರು. ವಿಮಲ್ ಸುಂದರ ಯುವತಿ ಯಾಗಿದ್ದುದಲ್ಲದೆ ಹವ್ಯಾಸಿ ರಂಗಭೂಮಿಯಲ್ಲಿ ನುರಿತ ನಟಿಯಾಗಿ ಹೆಸರು ಮಾಡಿದ್ದರು. ಚಿತ್ರರಂಗಕ್ಕೆ ಸೇರಲು ಬಂದಿದ್ದ ಆಹ್ವಾನವನ್ನು ಸ್ವೀಕರಿಸಬೇಕೋ ಬೇಡವೋ ಎಂಬುದರ ಬಗ್ಗೆ ಮೊದಲಿಗೆ ಅವರಲ್ಲಿ ಸ್ಪಷ್ಟ ನಿರ್ಧಾರ ವಿರಲಿಲ್ಲ, ಆದರೆ ದಾಯಾದಿ ಶ್ರೀನಿವಾಸ ಹಾಗೂ ಇತರ ಸ್ನೇಹಿತರು ಅದನ್ನು ಒಪ್ಪಿಕೊಳ್ಳುವಂತೆ ಅವರನ್ನು ಪ್ರೇರೇಪಿಸಿ ದರು. ಪ್ರದರ್ಶನಾಭ್ಯಾಸ ಮತ್ತು ನಂತರ ಚಿತ್ರ ತೆಗೆಯುವುದು ಮುಂಬೈ, ಪೂನಾ, ಕೊಲ್ಹಾಪುರ ಮತ್ತು ಲಕ್ನೋಗಳಲ್ಲಿ, ಅಲ್ಲಿಗೆಲ್ಲಾ ವಿಮಲ್ ಹೋಗಿಬಂದರು. ಚಿತ್ರನಟಿಯಾಗಿ ಅವರು ಸಂಪಾದಿಸಿದ ಹಣ ಬಹಳ ಉಪಯೋಗಕ್ಕೆ ಬಂತು. ಅವರ ತಂಗಿಯ ವ್ಯಾಸಂಗಕ್ಕಲ್ಲದೆ ತಮ್ಮನಿಗೆ ಆಸರೆ ನೀಡಲು ಸಹ ಇದರಿಂದ ಸಾಧ್ಯವಾಯಿತು. ಕಮ್ಯುನಿಸ್ಟ್ ಪಕ್ಷಕ್ಕೂ ಅವರು ಸ್ವಲ್ಪ ಹಣವನ್ನು ದೇಣಿಗೆಯಾಗಿ ನೀಡಿದರು. ಹೀಗೆ ಚಿತ್ರನಟಿಯಾಗಿರುತ್ತಿದ್ದ ಕಾಲದಲ್ಲೊಮ್ಮೆ ವಿಮಲ್ ಒಂದು ಲೇಖನವನ್ನು ಪ್ರಕಟಿಸಿದರು. ಮಹಿಳೆಯರಿಗೆ ನಟನೆಯು ಒಂದ ಉದ್ಯೋಗವಾಗಿರಬಹುದೇ ಎಂಬುದರ ಬಗ್ಗೆ

ಜನಸಾಮಾನ್ಯರಲ್ಲಿ ಮನೆಮಾಡಿಕೊಂಡಿದ್ದ ಕೆಲವು ತಪ್ಪುಕಲ್ಪನೆಗಳನ್ನು ವಿಮಲ್ ಈ ಲೇಖನದ ಮೂಲಕ ನಿವಾರಿಸಿದರು. ಚಲನಚಿತ್ರೋದ್ಯಮದಲ್ಲಿದ್ದ ಸನ್ನಿವೇಶವನ್ನು ವಿವರಿಸಿ ಇನ್ನೂ ಹೆಚ್ಚುಹೆಚ್ಚಾಗಿ ಮಹಿಳೆಯರು ಚಲನಚಿತ್ರ ರಂಗವನ್ನು ಪ್ರವೇಶಿಸಬೇಕೆಂದು ಅವರು ವಾದಿಸಿದರು. ವಿಮಲ್ ಒಟ್ಟು ಆರು ಚಿತ್ರಗಳಲ್ಲಿ ನಟಿಸಿದ್ದಾರೆ. ನಾಟಕ ನಿರ್ದೇಶಕರಾಗಿದ್ದ ಎಂ.ಜಿ. ರಾಂಗ್ನೇಕರ್ ಅವರು ವಿಮಲ ಅವರನ್ನು "ಆಶೀರ್ವಾದ" ಎಂಬ ನಾಟಕದಲ್ಲಿ ಅಭಿನಯಿಸಲು ಆಹ್ವಾನಿಸಿದರು. ಜ್ಯೋತ್ಸ್ನಾ ಭೋಲೆಯವರ ಈ ನಾಟಕವು ಮುಂಬೈನ ಆಪೆರಾ ಹೌಸ್‌ನಲ್ಲಿ ಕಿಕ್ಕಿರಿದ ಜನರ ಮುಂದೆ ಹಲವು ಬಾರಿ ಪ್ರದರ್ಶನಗೊಂಡಿತು. ವಿಮಲ್‌ರ ನಟನೆಯನ್ನು ನೋಡಿದ ದುರ್ಗಾಬಾಯಿ ಖೋಟೆ ರಂಗಮಂಚದ ಮೇಲೆ ಬಂದು ವಿಮಲ್‌ರನ್ನು ಅಭಿನಂದಿಸಿದರು. ಅವರು ಚಲನಚಿತ್ರ ಕಲಾವಿದರಲ್ಲಿ ಶ್ರೇಷ್ಠರೆನಿಸಿಕೊಂಡಿದ್ದರು ಹಾಗೂ ವಿಮಲ್‌ರ ಎರಡನೆಯ ಚಲನಚಿತ್ರ ಅವರೊಂದಿಗಿನದಾಗಿತ್ತು.

1939ರಲ್ಲಿ ವಿಮಲ್ ಸರ್ದೇಸಾಯಿ ಕಮ್ಯೂನಿಸ್ಟ್ ಪಕ್ಷದ ಸದಸ್ಯರಾದರು ; ಅದೇ ವರ್ಷ ಬಿ.ಟಿ. ರಣದಿವೆಯವರನ್ನು ಮದುವೆಯಾದರು. ಅವರು ಒಬ್ಬರನೊಬ್ಬರು ಹಲವು ವರ್ಷಗಳಿಂದ ಬಲ್ಲವರಾಗಿದ್ದರು. ವಿಮಲ್ ನೆನಪಿಸಿಕೊಳ್ಳುವ ಒಂದು ಸನ್ನಿವೇಶವಿದೆ. ಅವರು ಮದುವೆಗೆ ಮುಂಚಿನ ಘಟನೆ. ಬಿಟಿಆರ್ ಸಿಗರೇಟ್ ಸೇದುತ್ತಿದ್ದುದು ಅತಿಹೆಚ್ಚು. ಒಮ್ಮೆ ಅವರಿಗೆ ಶ್ವಾಸಕೋಶವು ಕೆಟ್ಟು ನ್ಯುಮೋನಿಯ ಕಾಣಿಸಿಕೊಂಡಿತು. ಮುಂಬೈನ ಒಂದು ಆಸ್ಪತ್ರೆಯಲ್ಲಿ ಅವರು ಹಲವು ದಿನಗಳ ಕಾಲ ಇರಬೇಕಾಗಿಬಂತು. "ಬಿಟಿಆರ್ ಬದುಕಿ ಉಳಿಯುತ್ತಾರೆಂದು ಯಾರೂ ನಿರೀಕ್ಷಿಸಿರಲಿಲ್ಲ. ಎಷ್ಟೋ ಮಂದಿ ಆಗಲೆ ಸಂಪಾದಕೀಯ ಲೇಖನಗಳನ್ನು ಬರೆದಿದ್ದು ಅಚ್ಚುಮಾಡಲು ಕಾಯುತ್ತಿದ್ದರು." ಆದರೆ ಬಿಟಿಆರ್ ಗುಣಮುಖರಾದರು ಮತ್ತು ವಿಶ್ರಾಂತಿಗಾಗಿ ಪೂನಾಕ್ಕೆ ಕಳಿಸಲ್ಪಟ್ಟರು. ಚಲನಚಿತ್ರವೊಂದರಲ್ಲಿ ನಟಿಸುವ ಸಲುವಾಗಿ ಆಗ್ಗೆ ಪೂನಾದಲ್ಲಿದ್ದ ವಿಮಲ್‌ರು ಬಿಟಿಆರ್ ಅವರನ್ನು ಚೆನ್ನಾಗಿ ನೋಡಿಕೊಂಡರು. 1946ರಲ್ಲಿ ವಿಮಲ್‌ರ ಮಗ ಉದಯ್ ಜನಿಸಿದ ಮೇಲೆ ವಿಮಲ್ ತಮ್ಮ ಬಹುಮುಖೀ ಕೆಲಸವನ್ನು ಮುಂದುವರಿಸಿದರು ; ಒಂದು ಕಡೆ ತಾಯ್ತನದ ಜವಾಬ್ದಾರಿ, ಇನ್ನೊಂದು ಕಡೆ ಕಛೇರಿ ಹಾಗೂ ಪಕ್ಷದಲ್ಲಿ ಮತ್ತು ಮಹಿಳಾ ಸಂಘದ ಕೆಲಸ. ವಿಮಲ್ ಇವನ್ನೆಲ್ಲಾ ಸರಿದೂಗಿಸುತ್ತಿದ್ದರು. ಕೆಲವೊಮ್ಮೆ ಉದಯನನ್ನು ಸಂಗಾತಿ ಖಾರ್ಡೀಕರ್ ಜೊತೆ ಬಿಟ್ಟು ಹೋಗುತ್ತಿದ್ದರು. ಅವರನ್ನು ಕಂಡರೆ ಉದಯನಿಗೆ ಬಹಳ ಅಕ್ಕರೆ. 1948ರಲ್ಲಿ ವಿಮಲ್ ಮತ್ತು ಬಿಟಿಆರ್ ಇಬ್ಬರೂ ದಸ್ತಗಿರಿಯಾದಾಗ ಉದಯನ ವಯಸ್ಸು ಕೇವಲ ಎರಡು ವರ್ಷ. ಪಕ್ಷದ ಮುಂಬೈ ಸಮಿತಿಯು ಗಿರಣಿ ಕಾರ್ಮಿಕರ ಸಂಘದ ಕಛೇರಿಯ ಬಳಿ ದಾಲ್ವಿಯಲ್ಲಿನ ಒಂದು ಕಟ್ಟಡದಲ್ಲಿ ರಹಸ್ಯ ಸಭೆ ನಡೆಸುತ್ತಿತ್ತು. ಅಲ್ಲಿಗೆ ಪೊಲೀಸರು ಬರುತಿತ್ತದ್ದುದರಿಂದ ಸಪ್ಪಳ ಕೇಳಿಸಿತು. ಕೂಡಲೆ ದಸ್ತಾವೇಜನ್ನು ಹರಿದುಹಾಕಲಾಯಿತು. ಹರಿದ ಕೆಲವು ಚೂರುಗಳನ್ನು ಬಚ್ಚಿಡಲಾಯಿತು ಮತ್ತು ಕೆಲವನ್ನು ಚರಂಡಿಗೆ ಹಾಕಲಾಯಿತು. ವಿಮಲ್ ಒಳಗೊಂಡಂತೆ ಇಡೀ ಗುಂಪನ್ನು ಬಂಧಿಸಿ ಆರ್ಥರ್ ರೋಡ್ ಜೈಲಿಗೆ ಬಂದಿಗಳನ್ನಾಗಿ ಕೊಂಡೊಯ್ಯಲಾಯಿತು. ಅವರ ಮೊದಲ ಪ್ರತಿಭಟನಾ ಕಾರ್ಯಕ್ರಮವೆಂದರೆ ಉಪವಾಸ ಸತ್ಯಾಗ್ರಹ. ಇದರಲ್ಲಿ ಮುಂಬೈ, ನಾಸಿಕ್ ಮತ್ತು ಯೆರವಾಡಾ ಜೈಲುಗಳ ಕೈದಿಗಳೂ ಭಾಗಿಗಳಾದರು. ರಾಜಕೀಯ ಕೈದಿಗಳನ್ನು ವರ್ಗಗಳಾಗಿ ವಿಂಗಡಿಸುವುದನ್ನು ರದ್ದುಗೊಳಿಸಬೇಕೆಂಬುದು ಆಗಿನ ಹಕ್ಕೊತ್ತಾಯವಾಗಿತ್ತು. ಉಪವಾಸ ಸತ್ಯಾಗ್ರಹದ ನಂತರ ಕೂಡಲೆ ಬಂದಿಗಳನ್ನೆಲ್ಲಾ ಪೂನಾದ ಯೆರವಾಡಾ ಜೈಲಿಗೆ ಸ್ಥಳಾಂತರಿಸಲಾಯಿತು.

ವಿಮಲ್ ಅವರು ಬಂಧಿತರಾಗಿದ್ದ ಸಮಯದಲ್ಲಿ ಎರಡು ವರ್ಷ ವಯಸ್ಸಿನ ಉದಯ್ ಪ್ರಮೀಳಾ ಖಾಲೆ ಎಂಬ ಚಿಕ್ಕಮ್ಮನ ಆಶ್ರಯದಲ್ಲಿದ್ದ ತಾಯಿಯನ್ನು ಭೇಟಿಯಾಗಲು ಅವನನ್ನು ಜೈಲಿಗೆ ಕರೆದುಕೊಂಡು ಹೋಗುತ್ತಿದ್ದರು. ಅಂತಹ ಸಂದರ್ಭಗಳಲ್ಲಿ ತಾಯಿಯನ್ನು ನೋಡಿದ ಮಗುವನ್ನು ಆ ಜಾಗ ಬಿಟ್ಟು ಹೋಗುವಂತೆ ಮಾಡಲು ಹರಸಾಹಸ ಮಾಡಬೇಕಾಗುತ್ತಿತ್ತು. ಒಮ್ಮೆ ಮಗುವನ್ನು ಒಂದು ರಾತ್ರಿ ತಮ್ಮೊಡನೆ ಇರಿಸಿಕೊಳ್ಳಲು ವಿಮಲ್‌ರಿಗೆ ಅನುಮತಿ ದೊರೆತಿತ್ತು. ಆಗ ಮಗುವಿಗೆ ಸಂಭ್ರಮವೋ ಸಂಭ್ರಮ. ಕತ್ತಲಾಗುವವರೆಗೆ ಜೈಲಿನ ಆವರಣದಲ್ಲಿ ಅತ್ತಿಂದಿತ್ತ ಓಡಾಡುವುದು ಮಗುವಿಗೆ ಆನಂದವನ್ನುಂಟುಮಾಡಿತ್ತು. ರಾತ್ರಿಯಾದಾಗ ಬಂದಿಗಳನ್ನೆಲ್ಲಾ ಅವರವರ ಕೋಣೆಗಳಲ್ಲಿ ಕೂಡಿಹಾಕಲು ಜೈಲಿನ ಮೇಲ್ವಿಚಾರಕ ಬರುತ್ತಿದ್ದ. ತಾಯಿ ಸ್ಮರಿಸಿಕೊಳ್ಳುವಂತೆ, "ಕೂಡಿಹಾಕಿಸಿಕೊಳ್ಳುವುದು ಉದಯನಿಗೆ ಬಹಳ ಕೋಪ ತಂದಿತ್ತು. ಚೆನ್ನಾಗಿ ಅತ್ತು ಮೇಲ್ವಿಚಾರಕನ ಕೈ ಸಹ ಅವನು ಕಚ್ಚಿಹಾಕಿಬಿಟ್ಟಿದ್ದ." ಮಾರನೆಯ ದಿನ ಬೆಳಿಗ್ಗೆ ಎದ್ದಾಗ ಕೋಣೆಯ ಬಾಗಿಲು ತೆರೆದಿತ್ತು ; ಅದನ್ನು ನೋಡಿ ಮಗುವಿಗೆ ಮತ್ತೆ ಲವಲವಿಕೆ ತುಂಬಿಬಂದು ಹರ್ಷವುಂಟಾಯಿತು.

ವಿಮಲ್‌ರ ಸಂಬಂಧಿಗಳು ಮಗುವನ್ನು ವಾಪಸ್ಸು ಕರೆದು ಕೊಂಡು ಹೋಗಲು ಅಂದು ಮಧ್ಯಾಹ್ನ ಬಂದಾಗ ತಾಯಿಯ ಕಂಕುಳಿಂದ ಇಳಿಯಲು ಮಗು ನಿರಾಕರಿಸಿತು.

ವಿಮಲ್ ನೇರವಾಗಿ ಕಾರ್ಮಿಕ ಸಂಘಗಳ ಚಳವಳಿಯಲ್ಲಿ ತೊಡಗಿಕೊಂಡದ್ದು 1960ರ ದಶಕದ ಕೊನೆಯ ವರ್ಷಗಳಲ್ಲಿ. ಸಂಘದ ಕೇಂದ್ರ ಕಚೇರಿಯು ಕಲ್ಕತ್ತೆಗೆ ಸ್ಥಳಾಂತರಿಸಲಾಗಿದ್ದುದರಿಂದ ಬಿಟಿಆರ್ ಅವರೊಡನಿರಲು ವಿಮಲ್ ಸಹ ಅಲ್ಲಿಗೆ ಹೋದರು. ಅಲ್ಲಿ ಬಂಗಾಳಿ ಕಲಿಯತೊಡಗಿದರಾದರೂ ಬೇರೇನೂ ಚಟುವಟಿಕೆಗಳು ಇಲ್ಲದಿದ್ದುದರಿಂದ ಬಹಳ ಚಡಪಡಿಸಿದರು. ಆ ಬಗ್ಗೆ ಅವರೇ ಹೇಳಿದ ಮಾತಿದು : ''ಪಕ್ಷದ ಪೂರ್ಣಾವಧಿ ಕಾರ್ಯಕರ್ತೆಯಾಗಿ ಸುಮ್ಮನೆ ಮನೆಯಲ್ಲಿ ಕೂಡುವುದು, ಅಡಿಗೆ ಬೇಯಿಸುವುದು, ಯಾವಾಗಲೋ ಒಮ್ಮೊಮ್ಮೆ ಸಭೆಗಳಲ್ಲಿ ಭಾಗವಹಿಸುವುದು, ಇವೆಲ್ಲಾ ಅಸಾಧ್ಯವೆನಿಸತೊಡಗಿತ್ತು. ನನಗೆ ಬೇಸರ ಹೆಚ್ಚಾಗುತ್ತಾ ಏನೋ ಪ್ರಯೋಜನಕ್ಕೆ ಬಾರದವಳೆಂಬ ಭಾವ ಬೆಳೆಯತೊಡಗಿತು.'' ಭಾರತೀಯ ಕಾರ್ಮಿಕ ಸಂಘಗಳ ಕೇಂದ್ರದ (ಸಿಐಟಿಯು) ಕಚೇರಿಗೆ ಪ್ರತಿನಿತ್ಯ ಹೋಗಬೇಕೆಂದು ಬಿಟಿಆರ್ ಸಲಹೆ ನೀಡಿದರು. ಡಾರ್ಜಿಲಿಂಗ್‌ನಲ್ಲಿ ಟೀ ತೋಟಗಳ ಕೆಲಸಗಾರರ ಸಮ್ಮೇಳನ ನಡೆಯುವುದಿತ್ತು, ಅದಕ್ಕೆ ಒಂದು ವರದಿ ಸಿದ್ಧಪಡಿಸಿಕೊಡಲು ಸೀಟೂನ ಕಾರ್ಯದರ್ಶಿ ಎಂ.ಕೆ. ಪಾಂಧೆ ವಿಮಲ್‌ರನ್ನು ಕೇಳಿದರು. ಹೀಗೆ ಕಾರ್ಮಿಕ ಸಂಘಗಳ ಕೆಲಸದಲ್ಲಿ ಹೆಚ್ಚೆಚ್ಚು ತೊಡಗಿಸಿಕೊಳ್ಳುತ್ತಾ ಹೋದರು ವಿಮಲ್. ಅವರೇ ಹೇಳುವಂತೆ ''ಕೆಲವು ತಿಂಗಳುಗಳ ನಂತರ ಕಾರ್ಮಿಕ ಸಂಘಗಳ ಕೆಲಸವು ನನ್ನ ಮೊದಲ ಆದ್ಯತೆಯಾಯಿತು. ಬಂಗಾಳ, ಕೇರಳ ಮತ್ತು ತಮಿಳುನಾಡು ರಾಜ್ಯಗಳಲ್ಲಿ ಸಮ್ಮೇಳನಗಳಲ್ಲಿ ಭಾಗವಹಿಸಿದೆ ಮತ್ತು ಅಲ್ಲಿಯ ಟೀ ತೋಟಗಳಿಗೆ ಹೋಗಿ ಮಹಿಳಾ ಕೆಲಸಗಾರರ ಪರಿಸ್ಥಿತಿಯ ಅಧ್ಯಯನ ಮಾಡಿದೆ. ನನಗೆ ಅದೊಂದು ಮಹತ್ವದ ಅನುಭವ.'' ಇದೇ ವಿಭಾಗದಲ್ಲಿ ವಿಮಲ್‌ರ ಕೆಲಸ ಮುಂದುವರೆಯಿತು. ಅಖಿಲ ಭಾರತ ಪ್ಲಾಂಟೇಶನ್ ಕೆಲಸಗಾರರ ಫೆಡರೇಶನ್ನಿನ ಪ್ರಧಾನ ಕಾರ್ಯದರ್ಶಿಯಾಗಿ ಚುನಾಯಿತರಾದ ವಿಮಲ್ ನಂತರ ಅದರ ಅಧ್ಯಕ್ಷರಾದರು.

*– ಪಾರ್ವತಿ ಮೆನನ್*

## ನೋಯಿಡಾದ ಅಸ್ಥಿಗಳು

ಯಾರಿಗೆ ಹುಡುಕುತ್ತಿರುವೆ ತಾಯಿ
ಕೈಯಲ್ಲಿ ಭಾವಚಿತ್ರ ಹಿಡಿದು
ಕರುಳ ಕುಡಿ ಹುಡುಕಿ ಕೊಡಿ ಎಂದು
ಕೇಳುತ್ತಿರುವೆಯಾ ಮಾಯಿ ?
ಕಾಲುಚೀಲ, ಬಟ್ಟೆ ತುಣುಕು
ಕೈಯಲ್ಲಿ ಹಿಡಿದು
ಖಾಕಿಗಳಿಗೆ ತೋರಿಸುತ್ತಿರುವೆಯಾ ?
ನಾಪತ್ತೆಯಾದ ಹೆಣ್ಣು ಕೂಸು
ಅಂಗಳದಲ್ಲಿ ಆಡುತ್ತಿದ್ದ ಕುವರಿ
ನೋಯಿಡಾದ ಚರಂಡಿಯಲಿ
ಮೂಟೆ ಕಟ್ಟಿದ ಗಂಟುಗಳಲಿ
ನಿನ್ನ ಮಗಳ ಅಸ್ಥಿಗಳು
ಸಿಕ್ಕರೂ ಸಿಗಬಹುದು ತಾಯಿ.
ಅರಸು ಬಾರೇ ತಾಯಿ
ಹೆಣ ರಾಶಿಯೇ ಇಲ್ಲಿದೆ
ಮೂಳೆಗಳ ಬೆಟ್ಟ ಅಗೆದು
ಅಸಂಖ್ಯ ತಲೆಬುರುಡೆಗಳ
ಮಧ್ಯ ಇದ್ದರೂ ಇರಬಹುದು
ನಿನ್ನ ಮಗಳ ಮೂಳೆಗಳೂ
ಕೊಳೆತ ಶವಗಳ ವಾಸನೆಯೂ
ತಟ್ಟಲಿಲ್ಲವೇ ಸರ್ಕಾರಕೆ
ಪಕ್ಕದವರಿಗೂ ತಿಳಿಯಲಿಲ್ಲವೇ ?
ಹೃದಯವಿಲ್ಲದ ಹಂತಕನ 'ಅಟ್ಟ'ಹಾಸ
ಮಕ್ಕಳ ಮಾರಣ ಹೋಮ
ಕೆಟ್ಟವಾಸನೆ ತಟ್ಟಲಿಲ್ಲವೆ ವ್ಯವಸ್ಥೆಗೆ ?
ಹುಡುಕು ಬಾ ತಾಯಿ ಕರುಳ ಕುಡಿ
ಶವರಾಶಿಯಲಿ ಸಿಕ್ಕಬಹುದೆಂಬ ಆಸೆ
ಮಮಹಾರದ ಹಂಗು ಹತ್ತಿಕ್ಕಿ
ಹುಡುಕು ಬಾ ತಾಯಿ
ಸಿಕ್ಕರೂ ಸಿಗಬಹುದು ಗಟಾರದಲಿ
ನಿನ್ನ ಮಗಳ ಮೂಳೆಗಳು.

*– ಕೆ. ಷರೀಫಾ*

# ನಾ ಓದಿದ ಪುಸ್ತಕ

- ಡಾ|| ಎಲ್.ಜಿ. ಮೀರಾ

| | |
|---|---|
| ಪುಸ್ತಕದ ಹೆಸರು | : ಪಿಂಚರ್ (ಕಾದಂಬರಿ) |
| ಲೇಖಕರು | : ಪಂಜಾಬಿ ಮೂಲ-ಅಮೃತಾ ಪ್ರೀತಮ್<br>ಅನುವಾದ - ಡಾ. ಎಲ್.ಸಿ. ಸುಮಿತ್ರಾ |
| ಪ್ರಕಾಶಕರು | : ಅಂಕಿತ ಪುಸ್ತಕ, ಬೆಂಗಳೂರು |
| ಪುಟಗಳು | : 104 ಬೆಲೆ : ರೂ. 50/- |
| ಪ್ರಕಟಣೆ ವರ್ಷ | : 2006 |

'ಪಿಂಜರ್' ಅನ್ನುವುದು ಈಚೆಗೆ ಡಾ. ಎಲ್.ಸಿ. ಸುಮಿತ್ರಾ ಅವರು, ಇಂಗ್ಲಿಷ್‌ನ ಮೂಲಕ ಕನ್ನಡಕ್ಕೆ ಅನುವಾದಿಸಿದ ಪಂಜಾಬಿ ಕಾದಂಬರಿ. ಜ್ಞಾನಪೀಠ ಪ್ರಶಸ್ತಿ ವಿಜೇತ ಲೇಖಕಿಯಾದ ಅಮೃತಾ ಪ್ರೀತಮ್ ಅವರ 'ಪಿಂಜರ್' ಕಾದಂಬರಿಯನ್ನು ಖ್ಯಾತ ಇಂಗ್ಲಿಷ್ ಲೇಖಕ ಖುಷ್‌ವಂತ್ ಸಿಂಗ್ ಇಂಗ್ಲೀಷಿಗೆ ಅನುವಾದಿಸಿದ್ದರು. ಈಗ ಈ ಕಾದಂಬರಿ, ತನ್ನ ಮೂಲ ಪಂಜಾಬಿ ಹೆಸರಿನೊಂದಿಗೆಯೇ ಕನ್ನಡಕ್ಕೆ ಬಂದಿದೆ.

'ಪಿಂಜರ್' ಅನ್ನುವುದು ಪಂಜಾಬಿ ಭಾಷೆಯ ಒಂದು ಪದ. ಪಿಂಜರ್ ಎಂದರೆ ಅಸ್ಥಿಪಂಜರ ಎಂದರ್ಥ. (ಇಂಗ್ಲಿಷ್‌ಗೆ ಖುಷ್‌ವಂತ್‌ಸಿಂಗ್ ಅನುವಾದಿಸಿದಾಗ "The skeleton" ಎಂದು ಹೆಸರಿಟ್ಟಿದ್ದರು). ಭಾರತಕ್ಕೆ ಸ್ವಾತಂತ್ರ್ಯ ಬರುವ ಸ್ವಲ್ಪ ಮೊದಲು, ದೇಶ ವಿಭಜನೆಯ ಪ್ರಶ್ನೆ ಬಂತು. ಆಗ ಭುಗಿಲೆದ್ದ ಧಾರ್ಮಿಕ ಸಮಸ್ಯೆಗಳ ಹಿನ್ನೆಲೆಯಲ್ಲಿ ನಲುಗಿದ ಹೆಣ್ಣುಮಕ್ಕಳ ಕಥೆ ಇಲ್ಲಿದೆ. ಹಿಂದೂಧರ್ಮದಿಂದ ಮುಸ್ಲಿಂಧರ್ಮಕ್ಕೆ, ಮುಸ್ಲಿಂ ಧರ್ಮದಿಂದ ಹಿಂದೂ ಧರ್ಮಕ್ಕೆ ಬಲವಂತದಿಂದ ಮತಾಂತರಗೊಂಡ ಹೆಣ್ಣುಗಳು ಹೇಗೆ ತಮ್ಮ ಜೀವಸತ್ವವನ್ನು ಕಳೆದುಕೊಂಡು ಕೇವಲ ಅಸ್ಥಿಪಂಜರಗಳಂತೆ ಬದುಕಬೇಕಾಯಿತು ಎಂಬುದರ ಹೃದಯಸ್ಪರ್ಶಿ ಚಿತ್ರಣ ಈ ಕಾದಂಬರಿಯಲ್ಲಿದೆ. 1936ರ ಆಸುಪಾಸಿನಲ್ಲಿ ಪಶ್ಚಿಮ ಪಂಜಾಬ್‌ನಲ್ಲಿ ನಡೆದ ಧರ್ಮಸಂಘರ್ಷದ ಘಟನೆಗಳು ಈ ಕಾದಂಬರಿಯ ಭಿತ್ತಿ. ಆ ಘಟನೆಗಳಿಂದ ನೊಂದ ಹೆಣ್ಣುಮಕ್ಕಳೇ ಇಲ್ಲಿನ ಕೇಂದ್ರ ಪಾತ್ರಗಳು.

ಈ ಕಾದಂಬರಿಯನ್ನು ಓದಲು ಪ್ರಾರಂಭಿಸಿದಾಗ ಪಂಜಾಬಿನ ಸಂಸ್ಕೃತಿ ಚಿತ್ರವೊಂದು ಸುಲಲಿತ ಕನ್ನಡದಲ್ಲಿ ಮೂಡಿ ಬರುತ್ತಿದೆಯೆಂದು ಓದುಗರಿಗೆ ಅನ್ನಿಸುತ್ತದೆ. ಚಿನ್ನದ ಬಣ್ಣದ ಗೋಧಿ, ಎಳ್ಳಿನ ಎಲೆ, ಕೆಂಪು ದಂತದ ಬಳೆಗಳು, ದುಪ್ಪಟ್ಟಾ...... ಪಂಜಾಬ್‌ನ ಪ್ರಾದೇಶಿಕ ಸೊಗಡು ಇವೆಲ್ಲವುಗಳ ಮೂಲಕ ಹರಿದು ಬರುತ್ತದೆ. ಆದರೆ ಈ ಭೌತಿಕ ವಿವರಗಳಾಚೆ ಇರುವ, ಇಲ್ಲಿನ ಸ್ತ್ರೀ ಪಾತ್ರಗಳ ನೋವಿನ ಹಾಡುಗಳಿಗೆ ಯಾವ ಪ್ರಾದೇಶಿಕ ಸೊಗಡೂ ಇಲ್ಲ. ಅವು ಎಲ್ಲೆಡೆಯ, ಎಲ್ಲ ಕಾಲದ ಹೆಣ್ಣುಮಕ್ಕಳ ನೋವಿನ ಹಾಡುಗಳು. ಕಾದಂಬರಿಯ ಪ್ರಮುಖ ಪಾತ್ರವಾದ ಪೂರೋ ಹಿಂದೂ ಹುಡುಗನೊಬ್ಬನೊಂದಿಗೆ ತನ್ನ ಮದುವೆ ನಿಶ್ಚಯವಾಗಿದ್ದರೂ ಕೌಟುಂಬಿಕ ದ್ವೇಷದ ಕಾರಣದಿಂದಾಗಿ ರಶೀದ್ ಎಂಬ ಮುಸ್ಲಿಂ ಹುಡುಗನಿಂದ ಅಪಹೃತಳಾಗಿ ಅವನನ್ನು ಮದುವೆ ಮಾಡಿಕೊಳ್ಳುವ ಅನಿವಾರ್ಯಕ್ಕೆ ತುತ್ತಾಗುತ್ತಾಳೆ. ಆ ಮದುವೆಗೆ ಮುಂಚೆ ತುಂಬ ಸಾಹಸ ಮಾಡಿ ತನ್ನ ಮನೆಗೆ ಓಡಿ ಬಂದರೂ, ಮುಸ್ಲಿಂ ಹುಡುಗನೊಂದಿಗೆ ಕೆಲ ದಿನ ಇದ್ದಳೆಂಬ ಕಾರಣಕ್ಕಾಗಿ ಅವಳ ತಂದೆತಾಯಿ ಅವಳನ್ನು ತಿರಸ್ಕರಿಸುತ್ತಾರೆ. ಇದರ ಪರಿಣಾಮವಾಗಿ ಗತ್ಯಂತರವಿಲ್ಲದೆ ರಶೀದ್‌ನನ್ನೇ ಮದುವೆಯಾಗುವ ಪೂರೋ ತನ್ನದಲ್ಲದ ಬಾಳನ್ನು ಬಾಳುತ್ತಾಳೆ. ಅವಳ ಹೆಸರನ್ನು ಹಮೀದಾ ಎಂದು ಬದಲಾಯಿಸಲಾಗುತ್ತದೆ. ಈ ಶೋಚನೀಯ ಸಂದರ್ಭದಲ್ಲಿ ಆ ಹೆಣ್ಣು ''ತಾನು ಪೂರೋಳೂ ಅಲ್ಲ ಹಮೀದಾಳೂ ಅಲ್ಲ, ಕೇವಲ ಒಂದು ಅಸ್ಥಿಪಂಜರ'' ಎಂದು ವ್ಯಥೆ ಪಡುತ್ತಾಳೆ.

ವ್ಯಥೆ ಪಡುತ್ತಲೇ ಇದ್ದುಬಿಡುವ ಆಯ್ಕೆಯಾದರೂ ಪೂರೋಳಿಗೆ ಎಲ್ಲಿತ್ತು ? ತನ್ನಿಚ್ಛೆಗೆ ವಿರುದ್ಧವಾಗಿ ತನ್ನ ಗರ್ಭದೊಳಗೆ ಸೇರಿದ್ದ ಮಗುವನ್ನು ತಕ್ಕಮಟ್ಟಿಗೆ ತನ್ನನ್ನು ಚೆನ್ನಾಗಿಯೇ ನೋಡಿಕೊಳ್ಳುತ್ತಿದ್ದ ರಶೀದನನ್ನು ನಿಧಾನವಾಗಿ ಅವಳು ಸ್ವೀಕರಿಸುವಂತೆ ಬದುಕಿನ ಘಟನೆಗಳು ನಡೆಯುತ್ತವೆ. ಹೀಗೆ ನೊಂದ ಪೂರೋ ತನ್ನಂತಹ ಇತರ ಹೆಣ್ಣುಮಕ್ಕಳ ಕಷ್ಟಗಳನ್ನು ಹೇಗೆ ಅರ್ಥಮಾಡಿಕೊಂಡಳು ಹಾಗೂ ತನಗೆ ನಾದಿನಿಯಾಗಬಹುದಾಗಿದ್ದ, ಈಗ ತನ್ನ ತಮ್ಮನ ಹೆಂಡತಿಯಾಗಿರುವ ಲಾಜೋಳನ್ನು ಧಾರ್ಮಿಕ ಆಕ್ರಮಣಕಾರರಿಂದ ಅವಳು ಹೇಗೆ ರಕ್ಷಿಸಿದಳು ಎಂಬುದೇ ಪಿಂಜರ್‌ನ ಕಥೆಯ ಮುಖ್ಯಾಂಶವಾಗಿದೆ.

'ಪಿಂಜರ್' ಸ್ತ್ರೀ ದೃಷ್ಟಿಕೋನವುಳ್ಳ ಒಂದು ಕಾದಂಬರಿಯಾಗಿದೆ. ಹೆಣ್ಣುಮಕ್ಕಳು ಹೇಗೆ ಹುಟ್ಟಿದ ಮನೆಗೇ ಪರಕೀಯರಾಗಿಬಿಡುತ್ತಾರೆ, ಮದುವೆ ಎಂಬುದು ಹೇಗೆ ಅವರ ಮೈ ಮನಸ್ಸುಗಳನ್ನು ದಣಿಸುತ್ತದೆ. ಕೌಟುಂಬಿಕ ದ್ವೇಷದಿಂದಾಗಿ ಅವರು ಏನೆಲ್ಲ ಅತ್ಯಾಚಾರಗಳಿಗೆ ಒಳಗಾಗುತ್ತಾರೆ ಎಂಬುದು ಈ ಕಾದಂಬರಿಯ ವಿವರ ವಿವರಗಳಲ್ಲಿದೆ, ಪಾತ್ರಗಳ ಮಾತುಗಳಲ್ಲಿದೆ ಮತ್ತು ಅವರು ಹಾಡುವ ಹಾಡುಗಳಲ್ಲಿದೆ. ತಮ್ಮ ಮೇಲೆ ಸಮಾಜವು ಹೇಳುವ ಬದುಕನ್ನು ಬದುಕಲೂ ಆಗದೆ, ಸಾಯಲೂ ಆಗದೆ ಇಲ್ಲಿನ ಸ್ತ್ರೀಯರು ಒದ್ದಾಡುತ್ತಾರೆ. ಕೌಟುಂಬಿಕ ಹಿಂಸೆಗಳ ಜತೆಗೆ ದೇಶವಿಭಜನೆಯ ಸಂದರ್ಭದಲ್ಲಿ 'ಶತ್ರು' ಗಂಡಸರ ನಿರ್ದಯತೆಗೂ ಅವರು ತುತ್ತಾಗುತ್ತಾರೆ. ಇಲ್ಲಿನ ಹಮೀದಾ, ತಾರೋ, ಕಮ್ಮೋ...... ಮುಂತಾದ ಸ್ತ್ರೀಯರ ಪರಿಸ್ಥಿತಿಯು ವಿಭಜಿತ ಭಾರತದ ಎಲ್ಲ ಹೆಣ್ಣುಮಕ್ಕಳ ಸ್ಥಿತಿಗೆ ಕನ್ನಡಿ ಹಿಡಿಯುತ್ತದೆ.

ಆದರೆ, ಪಿಂಜರ್ ಕಾದಂಬರಿ ಮುಖ್ಯವಾಗುವುದು ಹೆಣ್ಣುಮಕ್ಕಳ ನೋವನ್ನು ಚಿತ್ರಿಸಿಬಿಟ್ಟಿದೆ ಎಂಬುದಕ್ಕಾಗಿ ಮಾತ್ರವಲ್ಲ, ನೋವಿನ ವಿಷ ಕುಡಿಯುತ್ತಲೇ ಬೇರೆಯವರಿಗೆ ಸಾಂತ್ವನದ ಅಮೃತವನ್ನು ಕುಡಿಸುವ ಕಥಾನಾಯಕಿ ಹಮೀದಾಳ ಪಾತ್ರದಿಂದಾಗಿಯೂ ಅದು ಮುಖ್ಯವಾಗಿದೆ. ಗಟ್ಟಿ ಹೆಣ್ಣಾದ ಹಮೀದಾ ತನ್ನ ನೋವನ್ನು ನುಂಗಿಕೊಂಡು ಕಮ್ಮೋ, ಲಾಜೋ ಮುಂತಾದ ಹೆಣ್ಣುಗಳಿಗೆ ಸಹಾಯ ಮಾಡುತ್ತಾಳೆ. ಬೀದಿ ಬೀದಿ ಅಲೆಯುತ್ತಿದ್ದ ಹುಚ್ಚಿಯೊಬ್ಬಳನ್ನು ಕಾಮುಕನೊಬ್ಬ ಬಸಿರು ಮಾಡಿ ಅವಳು ಮಗು ಹೆತ್ತಾಗ ಆ ಮಗುವನ್ನು ತಾನೇ ಸಾಕುತ್ತಾಳೆ. ''ಸ್ವಂತದ ನೋವು ಇತರರ ನೋವನ್ನು ನೋಡುವ ದೃಷ್ಟಿಯನ್ನು ನೀಡುತ್ತದೆ'' ಎಂದು ಅಮೃತಾ ಪ್ರೀತಮ್ ತಮ್ಮ ಕವಿತೆಗಳ ಬಗ್ಗೆ ಹೇಳಿರುವ ಮಾತು ಇಲ್ಲಿ ಹಮೀದಾಳ ವಿಚಾರದಲ್ಲಿ ನಿಜವಾಗುತ್ತದೆ. ತಾನು ರಕ್ಷಿಸಿದ ಲಾಜೋಳನ್ನು, ಅವಳ ಗಂಡನಾದ ತನ್ನ ತಮ್ಮ ಮತ್ತು ಇತರ ಪರಿವಾರದೊಂದಿಗೆ ಭಾರತಕ್ಕೆ ಕಳಿಸಿ, ಹಮೀದಾ ಪಾಕಿಸ್ತಾನದಲ್ಲಿ ಉಳಿಯುವುದರೊಂದಿಗೆ ಕಾದಂಬರಿ ಮುಗಿಯುತ್ತದೆ.

ಇಲ್ಲಿ ಎಲ್.ಸಿ. ಸುಮಿತ್ರಾ ಅವರು ಕಾದಂಬರಿಯನ್ನು ಅನುವಾದಿಸಿದಷ್ಟೇ ಅಲ್ಲದೆ ಕಾದಂಬರಿಕಾರ್ತಿಯಾದ ಅಮೃತಾ ಪ್ರೀತಮ್‌ರ ವ್ಯಕ್ತಿತ್ವ ಮತ್ತು ಬರಹಗಳ ಬಗ್ಗೆ ಒಂದು ಸುವಿಸ್ತಾರ ಲೇಖನವನ್ನು ಬರೆದಿದ್ದಾರೆ. ''ಮಾನವನ ಮನಸ್ಸಿನಲ್ಲಿ ನಿದ್ರಿಸುತ್ತಿರುವ ದೇವತೆಗಳನ್ನು ಎಚ್ಚರಿಸುವುದ ಕ್ಕಾಗಿಯೇ ಜೀವನ ಪೂರ್ತಿ ಯೋಚಿಸಿ ಬರೆದೆ'' ಎಂದ ಅಮೃತಾ ''ನನ್ನ ಶವದ ಬಳಿ ನನ್ನ ಲೇಖನಿ ಇಡಬೇಕೆಂದು ಬಯಸುತ್ತೇನೆ'' ಎಂದಿದ್ದರು. ಇಂತಹ ವ್ಯಕ್ತಿತ್ವದ ಅಮೃತಾ ರನ್ನು ಪರಿಚಯಿಸುವ ಸುಮಿತ್ರಾರ ಲೇಖನ ಉಪಯುಕ್ತ ವಾಗಿದೆ.

ಇನ್ನು ಅನುವಾದದ ಬಗ್ಗೆ ಕೆಲವು ವಿಚಾರಗಳನ್ನು ಹೇಳಲೇಬೇಕು. ಗಾಢವಾದ ಸ್ತ್ರೀ ಸಂವೇದನೆಯುಳ್ಳ ಈ ಕಾದಂಬರಿಯನ್ನು ಆಯ್ಕೆ ಮಾಡಿಕೊಂಡಿರುವುದೇ ಇಲ್ಲಿ ಉತ್ತಮ ಅಭಿರುಚಿಯನ್ನು ತೋರಿದೆ. ಅನುವಾದದ ಭಾಷೆ ಸರಳ ಮತ್ತು ಮೊದಲೇ ಹೇಳಿದಂತೆ ಸುಲಲಿತವಾಗಿದೆ. ಸಂವಹನಕ್ಕೆ ಎಲ್ಲಿಯೂ ತೊಡಕಾಗದಂತೆ ಅನುವಾದ ಮಾಡಲ್ಪಟ್ಟ ಕಾದಂಬರಿ ಇದು. ಬೇರೆ ಭಾಷೆಯ ಪ್ರಾದೇಶಿಕ ಸೊಗಡನ್ನು ಉಳಿಸಿಕೊಂಡೂ ಸಹ ಸುಲಲಿತವಾಗಿ ಕನ್ನಡಿಸಲ್ಪಟ್ಟಿದೆ ಎಂದು ಓದುಗರಿಗೆ ಅನ್ನಿಸದಿರದು.

ಒಟ್ಟಿನಲ್ಲಿ ''ಪಿಂಜರ್'' ಕಾದಂಬರಿ ಕನ್ನಡ ಕಾದಂಬರಿ ಸಾಹಿತ ಕ್ಷೇತ್ರಕ್ಕೆ ಒಂದು ಉತ್ತಮವಾದ ಕೊಡುಗೆಯಾಗಿದೆ. ಪಿಂಜರ್‌ನಂತೆ ಇನ್ನಷ್ಟು ಕಾದಂಬರಿಗಳು ಕನ್ನಡಕ್ಕೆ ಬಂದು ನಮ್ಮ ಸಂವೇದನೆಯನ್ನು ಶ್ರೀಮಂತಗೊಳಿಸಲು, ಕನ್ನಡಿಗರ ಮನಸ್ಸಿನಲ್ಲಿ ಮಲಗಿರುವ ದೇವತೆಗಳನ್ನು ಎಚ್ಚರಿಸಲಿ ಎಂದು ಹಾರೈಸೋಣ. ಸುಮಿತ್ರಾ ಅವರ ಈ ಯಶಸ್ವಿ ಪ್ರಯತ್ನ ಅವರನ್ನು ಇನ್ನಷ್ಟು ಇಂತಹ ಬರಹಗಳನ್ನು ಬರೆಯುವಂತೆ ಪ್ರೇರೇಪಿಸಲಿ ಎಂದು ಆಶಿಸೋಣ.

●

# ಹೇಳುವುದು ಒಂದು ಮಾಡುವುದು ಇನ್ನೊಂದು

- ಸುವರ್ಣ ಡಿ.ಎಸ್.

ಮಹಿಳಾ ರಾಜಕೀಯ ಸಮಾನ ಸ್ಥಾನಮಾನವನ್ನು ನೀಡುವ ವಿಚಾರದಲ್ಲಿ ಈಗಿನ ಸಮ್ಮಿಶ್ರ ಸರ್ಕಾರ ಎಡಬಿಡಂಗಿ ತನವನ್ನು ಪ್ರದರ್ಶಿಸುತ್ತಿದೆ ಎನ್ನುವ ವಿಚಾರ ಸಂಪುಟ ವಿಸ್ತರಣೆಯ ರೂಪದಲ್ಲಿ ಇವರು ನೀಡುವ (ಸಮ್ಮಿಶ್ರ ಸರ್ಕಾರ) ಸಮಾನತೆ ಎಷ್ಟರ ಮಟ್ಟಿಗೆ ಸಾಬೀತು ಪಡಿಸುತ್ತಿದೆ ಎಂಬುದನ್ನು ಕಾಣಬಹುದು.

ಜೆ.ಡಿ (ಎಸ್) ಮತ್ತು ಬಿ.ಜೆ.ಪಿ. ಎರಡೂ ಪಕ್ಷಗಳ ನಾಯಕರು, ಎಷ್ಟರ ಮಟ್ಟಿಗೆ ಮಹಿಳೆಯರ ಬಗ್ಗೆ ಕಾಳಜಿ ಹೊಂದಿದ್ದಾರೆಂಬುದು ಸಮ್ಮಿಶ್ರ ಸರ್ಕಾರದ ಸಂಪುಟದಲ್ಲಿನ ಅಧಿಕಾರ ಹಂಚಿಕೆಯಿಂದ ಮಹಿಳೆಯರ ರಾಜಕೀಯ ಬಲಾ ಬಲಗಳು ಎಷ್ಟರ ಮಟ್ಟಿಗೆ ಇವೆ ಎಂಬುದನ್ನು ರಾಜಕೀಯ ಮಹಿಳಾ ಮಣಿಗಳು ಚಿಂತಿಸಬೇಕಾದ ಸಂದಿಗ್ಧ ಪರಿಸ್ಥಿತಿ ಒದಗಿ ಬಂದಿದೆ.

ಮಹಿಳೆಯರ ಸ್ಥಾನಮಾನಗಳ ಬಗ್ಗೆ ಉದ್ದುದ್ದಾ ಭಾಷಣ ಬಿಗಿಯುವ ಇಂತಹ ರಾಜಕೀಯ ನಾಯಕರು, ಶಾಸಕರುಗಳು ಬರೀ ಮಾತಿನ ಮಲ್ಲರಾಗಿ ವೇದಿಕೆಯ ಮೇಲಷ್ಟೇ ಅನುಕಂಪ ತೋರುವ ಇಂತಹ ಅವಕಾಶವಾದಿಗಳು ಮಹಿಳಾ ರಕ್ಷಣೆ ಎನ್ನುರ ನಾಟಕೀಯ ಮಾತುಗಳಿಂದ ಜನರನ್ನು ವಿಮುಖರನ್ನಾಗಿಸಿ ರಾಜಕೀಯ 'ವೋಟ್ ಬ್ಯಾಂಕ್' ನಿರ್ಮಿಸಿಕೊಳ್ಳುವ ರಾಜಕೀಯ ಷಡ್ಯಂತ್ರವಾಗಿದೆ.

ಇನ್ನೂ ಈ ರಾಜಕೀಯ ಪಕ್ಷಗಳ ಮಹಿಳಾ ಶಾಸಕರುಗಳು, ಮಹಿಳಾ ರಾಜಕೀಯ ವ್ಯಕ್ತಿಗಳು ಪಾಲಿಗೆ ಬಂದದ್ದು ಪಂಚಾಮೃತ ಎಂಬಂತೆ ಬಂದದ್ದನ್ನು ಸಮಾಧಾನ, ತೃಪ್ತಿಯಿಂದ ಸ್ವೀಕರಿಸುತ್ತಿದ್ದೇವೆ ಎನ್ನುವ ನೀತಿ ಮಾತಿನ ಹಾಗೆ ಮೌನಗೌರಿಗಳಂತೆ ವರ್ತಿಸುತ್ತಿದ್ದಾರೆ. ಇವರಿಗೆ ರಾಜಕೀಯ ಅನ್ಯಾಯದ ವಿರುದ್ಧ ಪ್ರತಿಭಟಿಸುವ ಆಲೋಚನೆ ಇಲ್ಲವೇ ? ಪ್ರತಿಭಟಿಸುವ ಮಹಿಳಾ ರಾಜಕೀಯ ಶಕ್ತಿಗಳ ಜೊತೆ ಕೈಗೂಡಿಸಿದ್ದರೆ ಸಂಘಟಿಸುವ ಮನೋಭಾವ ಹಾಗೂ ಮಹಿಳಾ ರಾಜಕೀಯದ ಬಗ್ಗೆ ಕಾಳಜಿ ಇದೆ ಎನ್ನುವ ಒಮ್ಮತ ಮೂಡುತ್ತಿದ್ದಿತೇನೋ ? ಇಂತಹ ವಿಷಯಗಳಲ್ಲಿ ರಾಜಕೀಯ ಕುತಂತ್ರವೇ ಹೆಚ್ಚು.

ಚುನಾವಣೆಯಲ್ಲಿ ಮಹಿಳೆಯರಿಗೆ 30%ರಷ್ಟು ಮೀಸಲಾತಿ ನೀಡಿದರೆ ಏನು ಪ್ರಯೋಜನ ? ಬರೀ ಜಿಲ್ಲಾ ಪಂಚಾಯತ್, ಗ್ರಾಮ ಪಂಚಾಯತ್, ನಗರ ಸಭೆಗಳಿಗಷ್ಟೇ ಸೀಮಿತಗೊಂಡು, ಅದರಲ್ಲೂ ಹಲವಾರು ಮಂದಿ ಮಹಿಳೆಯರು "ಡಮ್ಮಿ ಕ್ಯಾಂಡಿಡೇಟ್"ಗಳಾಗಿರುತ್ತಾರೆ. ಇಂತಹ ಸಂದಿಗ್ಧ ಸ್ಥಿತಿಯನ್ನು ನೋಡಿದರೆ, 50%ರಷ್ಟು ಮೀಸಲಾತಿಯನ್ನು ನೀಡಿದರೂ ಪರಿಸ್ಥಿತಿ ಇಷ್ಟೇ ಇರುವಂತಿದೆ. ಇಂತಹ ಗಂಭೀರ ಸನ್ನಿವೇಶದಲ್ಲಿ ಇಂದಿರಾ ಗಾಂಧಿಯವರಂತಹ ಧೀರ ರಾಜಕೀಯ ಮಹಿಳೆಯರನ್ನು ಒಮ್ಮೆ ಮನದಲ್ಲಿ ನೆನೆಯಬೇಕೆನ್ನಿಸುತ್ತದೆ. ಬಹುಶಃ ಇವರನ್ನಾದರೂ ನೆನೆಸಿಕೊಂಡರೆ ಮುಂದಿನ ಭವಿಷ್ಯ ರಾಜಕಾರಣದಲ್ಲಿ ಪ್ರಜ್ಞಾವಂತ, ಧೈರ್ಯ, ಆತ್ಮವಿಶ್ವಾಸ, ಛಲವುಳ್ಳ, ಸಾಹಸಿ ಸಂಘಟನಾಶಕ್ತಿ ಮಹಿಳಾ ರಾಜಕಾರಣಿಗಳು ಸೃಷ್ಟಿಯಾಗಿ ಬಹುಶಃ ಕರ್ನಾಟಕದಲ್ಲಿ ಪ್ರಪ್ರಥಮ ಮಹಿಳಾ ಮುಖ್ಯಮಂತ್ರಿಯಾಗಿ ಕರ್ನಾಟಕದ ಇತಿಹಾಸದಲ್ಲಿ ಚಾರಿತ್ರಿಕ ಚರಿತ್ರೆಯನ್ನು ಸೃಷ್ಟಿಸುತ್ತಾರೇನೋ ? ಇಂತಹ ಧೀರ ಮಹಿಳಾ ರಾಜಕಾರಣಿಗಳು ಕರ್ನಾಟಕದ ಯಾವ ಮೂಲೆಯಲ್ಲಡಗಿದ್ದಾರೋ ?

ಸಮ್ಮಿಶ್ರ ಸರ್ಕಾರದ ಮತ್ತೊಂದು ವಿಶಿಷ್ಟತೆ, ಜೆ.ಡಿ. (ಎಸ್) ಪಕ್ಷದ ಚಿನ್ಹೆ ದೇಶದ ಸಮೃದ್ಧತೆ, ಸಮಾನತೆ, ಗೌರವವನ್ನು ಸೂಚಿಸುವ 'ತೆನೆ ಹೊತ್ತ ಹೆಣ್ಣು' ಇಂತಹ ಚಿನ್ಹೆಯನ್ನು ಪಕ್ಷದ ಲಾಂಛನವನ್ನಾಗಿ ಸ್ವೀಕರಿಸಿದ್ದೂ ಅಲ್ಲದೆ ಭಾಷಣಗಳಲ್ಲಿ ಭೀಷ್ಮ ಪ್ರತಿಜ್ಞೆಯನ್ನೂ ಮಾಡುವ ಇವರುಗಳು ಹೇಳುವುದು ಒಂದಾದರೆ, ಮಾಡುವುದು ಇನ್ನೊಂದು ಎಂಬ ಗಾದೆಗೆ ತಕ್ಕವರಾಗಿದ್ದಾರೆ. ಮಗುವನ್ನು ಚಿವುಟುವುದು, ತೊಟ್ಟಿಲನ್ನೂ ತೂಗುವ ರೀತಿಯಲ್ಲಿ ಇವರ ಕಾರ್ಯವೈಖರಿ ಸಾಗುತ್ತಿದೆ. ಒಂದು ಕಡೆ ತಮ್ಮ ಸ್ವಾರ್ಥ ಸಾಧನೆಗಾಗಿ ಅಧಿಕಾರ ಹಂಚಿಕೆಯನ್ನು ಮಾಡಿ ಇನ್ನೊಂದು ಕಡೆ ಕಣ್ಣೊರೆಸುವ ಕೆಲಸವನ್ನು ನಿರ್ವಹಿಸುತ್ತಿದ್ದಾರೆ.

ಹೇಳುವ ಮಾತಿಗೂ, ನೀಡುವ ಭರವಸೆ, ಆಶ್ವಾಸನೆಗಳು ಒಂದಾದರೆ ಮಾಡುವ ಕೆಲಸಗಳಲ್ಲಿ ಮಲತಾಯಿ ಧೋರಣೆ ತೋರುತ್ತಿರುವ ಇಂತಹ ಸರ್ಕಾರದ ವಿರುದ್ಧ ಕರ್ನಾಟಕದ ಎಲ್ಲಾ ಸಾಹಸಿ, ವೀರ ಮಹಿಳೆಯರ ಧಿಕ್ಕಾರವಿದೆ. ಎಲ್ಲಾ ಪುರುಷ ಪ್ರಧಾನ ರಾಜಕೀಯ ನಡೆಸುತ್ತಿರುವ ರಾಜಕೀಯ ಪಕ್ಷಗಳ ನಾಯಕರುಗಳು ಮಹಿಳಾ ಪ್ರಾತಿನಿಧ್ಯಕ್ಕೆ ಯಾವ ರೀತಿಯ ನ್ಯಾಯ ದೊರಕಿಸಿಯಾರು ?.... ●

# ಕೆಂಪು ತೋಟದಲ್ಲಿ ಅರಳಿದ ಮಹಿಳಾ ಜಾನಪದದ ರಂಗು

ತೂರಬೇಡಿ ಗಾಳಿಗೆ
ಹೆಣ್ತನದ ಘನತೆಯ
ನಾಚಬೇಡಿ ಹೆಣ್ತನಕೆ
ತಲೆಯೆತ್ತಿ ನಿಲ್ಲಿರಿ.

ವಿಜಯಾದಬ್ಬೆಯವರು ರಚಿಸಿದ ಹಾಡಿನ ಈ ಸಾಲುಗಳೊಂದಿಗೆ ತಲೆಯೆತ್ತಿ ವಿಜೃಂಭಣೆಯಿಂದ ನಡೆಸಿಕೊಟ್ಟ ಮಹಿಳಾ ಜಾನಪದ ಕಾರ್ಯಕ್ರಮ ಬೆಂಗಳೂರಿನ ನಾಗರೀಕರಿಗೆ ವಿಶಿಷ್ಟ ಅನುಭವವನ್ನು ನೀಡಿತು. ಮೊದಲಿಗೆ ತಾಯಿ ಕಾವೇರಿಯ ಸ್ಮರಣೆಯಿಂದ ಕನ್ನಡಿಗರಿಗಾಗಿರುವ ಅನ್ಯಾಯವನ್ನು ಪ್ರತಿಭಟಿಸುವ ಮೂಲಕವೇ ಕಾರ್ಯಕ್ರಮವನ್ನು ಆರಂಭಿಸಿದ್ದು ಅರ್ಥಪೂರ್ಣವಾಗಿತ್ತು.

ಕೊಡಗಿನ ಮಡಿಕೇರಿಯ ರಾಣಿ ಮಾಚಯ್ಯ ನೇತೃತ್ವದ ಕಾವೇರಿ ಕಲಾಸಂಘವು ಆಕರ್ಷಕವಾಗಿ ನಡೆಸಿಕೊಟ್ಟ ಉಮ್ಮತ್ತಾಟದಿಂದಲೇ ಈ ಮಹಿಳಾ ಜಾನಪದ ಜಾತ್ರೆಯು ಆರಂಭವಾಯ್ತು. ''ಸಂಸ್ಕೃತಿಯ ಹುಟ್ಟು ಜನಪದದಿಂದ ಜನಪದದ ಹುಟ್ಟು ಹೆಣ್ಣಿನಿಂದ'' - ಇಂತಹ ಹೆಣ್ಣೇ ಇಡೀ ದಿನದ ಕಾರ್ಯಕ್ರಮವನ್ನು ನಡೆಸಿಕೊಟ್ಟದ್ದು ಈ ಕಾರ್ಯಕ್ರಮದ ವೈಶಿಷ್ಟ್ಯ.

ಬಾಗಲಕೋಟೆ, ಶಿವಮೊಗ್ಗ, ತುಮಕೂರು, ಉಡುಪಿ, ಬಳ್ಳಾರಿ, ಮೈಸೂರು, ಚಿತ್ರದುರ್ಗ, ಹಾವೇರಿ, ಹಾಸನ, ಚಾಮರಾಜನಗರ, ಮಡಿಕೇರಿ, ಬೆಂಗಳೂರು - ಸೇರಿದಂತೆ ಸುಮಾರು 20 ತಂಡಗಳು ಈ ಜಾನಪದ ಜಾತ್ರೆಯಲ್ಲಿ ಪಾಲ್ಗೊಂಡಿದ್ದವು.

ವಿವಿಧ ತಂಡಗಳ ನೃತ್ಯದ ನಡುವೆ ರಾಯಚೂರಿನ ಶಾಂತಾ ಅವರು ಆಕರ್ಷಕವಾಗಿ ಹಾಡುಗಳನ್ನು ಹಾಡಿ ರಂಜಿಸಿದರು. 'ಹೆಣ್ಣು ಮಕ್ಕಳನು ಕೊಡು ತಾಯೆ' ಎಂಬ ಅವರ ಹಾಡಿನ ಆಶಯವನ್ನು ಕಾರ್ಯಕ್ರಮದ ಹಲವಾರು ಪ್ರಸಂಗಗಳು ಪುಷ್ಟಿಗೊಳಿಸಿದವು.

ಯಲಹಂಕದ ಪ್ರಮೀಳಾ ಪ್ರಕಾಶ್ ನೈತೃತ್ವದ ಸ್ನೇಹಾ ಮಹಿಳಾ ವೀರಗಾಸೆ ತಂಡದವರು 'ಅಹಹಹಾ ವೀರಭದ್ರಾ' ಎಂದು ಕತ್ತಿ ಹಿಡಿದು ವೀರಗಾಸೆ ನೃತ್ಯ ಮಾಡಿದರು.

ಬೆಂಗಳೂರಿನ ಸಾಧ್ಯ ಸಂಗಮ ಶಾಲೆಯ ವಿದ್ಯಾರ್ಥಿಗಳು 'ತಿಂಗಾಳು ಮುಳುಗಿದವೋ' ಎಂಬ ಹಾಡಿಗೆ ಹೆಜ್ಜೆ ಹಾಕಿದರೆ, ಬಾಗಲಕೋಟೆಯ ಇಳಕಲ್‌ನ ಗುರುಬಸವ ಶಿಕ್ಷಕ ತರಬೇತಿ ಸಂಸ್ಥೆಯವರು 'ಮೂಡಲ್ ಕುಣಿಗಲ್ ಕೆರೆ' ಹಾಡಿಗೆ ನೃತ್ಯ ಮಾಡಿದರು.

ಹಾವೇರಿಯ ಸೇವಾಲಾಲ್ ಬಂಜಾರ ಲಮಾಣಿ ಕಲಾಸಂಘದ ಜೆಕ್ಕಿನ ಕಟ್ಟೆ ತಾಂಡಾವು ಲಂಬಾಣಿ ಜಾನಪದ ನೃತ್ಯ ಪ್ರಸುತ್ತ ಪಡಿಸಿದರೆ, ಪರಿಷ್ಕೃತ ಲಂಬಾಣಿ ನೃತ್ಯವನ್ನು ಇಳಕಲ್‌ನ ಎಸ್.ವಿ.ಎಂ. ಮಹಿಳಾ ಕಾಲೇಜಿನ ವಿದ್ಯಾರ್ಥಿನಿಯರು 'ಧೀರೆ ಧೀರೆ ನಾಚಿರೆ ವಯ್ಯಾರಿ ಲಂಬಾಣಿ' ಎಂದು ಹಾಡಿ ಕುಣಿದರು.

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಆಯೋಜಿಸಿದ್ದ ಈ ಮಹಿಳಾ ವಿಶೇಷ ಜಾನಪದ ಯಾತ್ರೆಯಲ್ಲಿ ಚೌಡಕಿ ಪದ, ವೀರಗಾಸೆ ನೃತ್ಯ, ಡೊಳ್ಳು ಕುಣಿತ, ಸಂಪ್ರದಾಯದ ಹಾಡುಗಳು, ಕಂಸಾಳೆ ಮತ್ತು ಪೂಜಾ ಕುಣಿತ, ಉಮ್ಮತ್ತಾಟ, ಲಂಬಾಣಿ ನೃತ್ಯ, ಸೋಬಾನೆ, ತಮಟೆ ನೃತ್ಯ - ಹೀಗೆ ಹತ್ತಾರು ಬಗೆಯ ನೃತ್ಯ, ಹಾಡುಗಳು ಮಹಿಳಾ ಪ್ರತಿಭೆಯ ವೈವಿಧ್ಯತೆಯನ್ನು, ಸಮೃದ್ಧತೆಯನ್ನು ಪ್ರದರ್ಶಿಸಿದವು. ಕೆಂಪೆಗೌಡ ಗೋಪುರದ ಗುಡ್ಡದ ತುಂಬ ಕುಳಿತಿದ್ದ ಜನ ಸಮೂಹ ಈ ವಿಶೇಷ ಮಹಿಳಾ ಅಭಿವ್ಯಕ್ತಿಯನ್ನು ಮನದುಂಬಿ ಆನಂದಿಸಿದರು.

●

# ಅಫ್ಘನ್ ಮಹಿಳೆಯರು ಮತ್ತು ಶಿಕ್ಷಣ

"1965ರಲ್ಲಿ ಕಾಬೂಲ್ ವಿಶ್ವವಿದ್ಯಾನಿಲಯದ ಆವರಣಕ್ಕೆ ಹೋಗಿದ್ದೆ. ಅಲ್ಲಿ ಬಿಸಿಲು ಕಾಯಿಸಿಕೊಳ್ಳುತ್ತಿದ್ದ ಅಮೆರಿಕನ್ ವಿದ್ಯಾರ್ಥಿಗಳ ಮುಖದಲ್ಲಿ ಸಂತೋಷವಿತ್ತು. ಅಫ್ಘನ್ ಮಹಿಳೆಯರನ್ನು ಆಧುನೀಕರಣಗೊಳಿಸುವ ನವೀನ ಪ್ರವೃತ್ತಿಯನ್ನು ಗಮನಿಸಿದೆ. ಅವನ್ನೆಲ್ಲ ನನ್ನ ಕ್ಯಾಮೆರಾ ಸೆರೆ ಹಿಡಿಯಿತು. ಒಂದು ಕಾಲೇಜಿನ ಮಹಿಳಾ ಪ್ರಿನ್ಸಿಪಾಲರು "ಹೆಚ್ಚು ಹೆಚ್ಚು ಬುರ್ಖಾಗಳು ಮೇಲೆ ಮೇಲೆ ಹೋದಷ್ಟೂ ಅಫ್ಘನ್ ತರುಣಿಯರಿಗೆ ಶೈಕ್ಷಣಿಕ ಹಾಗೂ ಉದ್ಯೋಗದ ಅವಕಾಶಗಳು ಹೆಚ್ಚುತ್ತಿವೆ" ಎಂದರು. ಅವರು ತಮ್ಮ ಕಾಲೇಜನ್ನೆಲ್ಲಾ ನನಗೆ ತೋರಿಸಿದರು. ಮಹಿಳಾ ಡಾಕ್ಟರುಗಳೇ ನಿರ್ವಹಿಸುತ್ತಿದ್ದ ಆಸ್ಪತ್ರೆಗೂ ನಾನು ಭೇಟಿಕೊಟ್ಟೆ.

ಹೆರಿಗೆ ಆಸ್ಪತ್ರೆಯೊಂದರಲ್ಲಿ ಗರ್ಭಿಣಿ ಸ್ತ್ರೀಯೊಬ್ಬಳನ್ನು ಮಹಿಳಾ ವೈದ್ಯರು ಪರೀಕ್ಷಿಸುತ್ತಿದ್ದರು. ಪಕ್ಕದಲ್ಲೇ ಆ ಗರ್ಭಿಣಿ ಸ್ತ್ರೀಯ ಅಜ್ಜಿ ಮುಗುಳ್ನಗುತ್ತಾ ನಿಂತಿದ್ದರು. ಅಲ್ಲಿಗೆ ನಾನು ಹೋಗಿದ್ದಕ್ಕೆ ಯಾರೂ ಆಕ್ಷೇಪಿಸಲಿಲ್ಲ. ನೂರಕ್ಕೆ ನೂರು ಮುಸ್ಲಿಮರಿರುವ ಆ ಸಂಪ್ರದಾಯಶರಣ ದೇಶದಲ್ಲಿ ಇದ್ದಕ್ಕಿದ್ದಂತೆ ಸಾರ್ವಜನಿಕವಾಗಿ ಮಹಿಳೆಯರ ಮುಖಗಳು ಕಾಣಿಸಿಕೊಂಡದ್ದು ಆ ದೇಶ ಇಟ್ಟ ಮುಖ್ಯವಾದ ಹೆಜ್ಜೆ ಎಂದು ತೋರಿತು.

ಜಗತ್ತನ್ನೆಲ್ಲ ಅಭಿವೃದ್ಧಿ ಮತ್ತು ಆಧುನೀಕರಣ ಆಕ್ರಮಿಸಿಕೊಳ್ಳುತ್ತಿರುವಾಗ ಆಫ್ಘಾನಿಸ್ಥಾನದಲ್ಲಿ ಕೂಡ ಸ್ತ್ರೀಯರ ಹಕ್ಕಿನ ಬಗ್ಗೆ ತಡವಾಗಿಯಾದರೂ ಜನರು ಪೂರ್ಣವಾಗಿ ಗಮನ ಹರಿಸುತ್ತಿದ್ದಾರೆ. ಬುರ್ಖಾ ಮರೆಯಾಗುತ್ತಿದೆ. ಸಂಗೀತಗಾರ್ತಿಯರು, ರೇಡಿಯೋದಲ್ಲಿ ವಾರ್ತೆಗಳನ್ನು ಓದುವವರು, ವಿಮಾನದಲ್ಲಿ ಸ್ವಾಗತಗಾರ್ತಿಯರು, ಮಹಿಳಾ ಆತಿಥೇಯರು, ಇವರೆಲ್ಲರ ಜೊತೆ ಮಾತನಾಡಿದೆ. ಬುರ್ಖಾ ಕಣ್ಮರೆಯಾದದ್ದಕ್ಕೆ ಆರ್ಥಿಕ ಮುಖವೂ ಒಂದುಂಟು. ದುಡಿಯುವವರ ಸಂಖ್ಯೆ ಎರಡರಷ್ಟಾಗಿತ್ತು. ವ್ಯಾಪಾರ ವಹಿವಾಟುಗಳಲ್ಲಿ, ಸರ್ಕಾರಿ ಕಛೇರಿಗಳಲ್ಲಿ ಮಹಿಳೆಯರು ದುಡಿಯುತ್ತಿದ್ದುದನ್ನ ಕಂಡೆ. ಅನೇಕರಿಗೆ ದೊರೆತದ್ದು ಗುಮಾಸ್ತೆಯ ಕೆಲಸ. ಆದರೆ ಅಪರೂಪಕ್ಕೆಂಬಂತೆ ಚೆನ್ನಾಗಿ ಕೇಶಾಲಂಕಾರ ಮಾಡಿಕೊಂಡಿದ್ದ ಆಫ್ಘನ್ ಮಹಿಳೆಯರು ಆಡಳಿತಾಧಿಕಾರಿಗಳಾದದ್ದೂ ಉಂಟು. ತರುಣಿಯರು ತಮ್ಮ ತಂದೆ-ತಾಯಿಯರ ಅಪ್ಪಣೆ ಪಡೆದು ಆಫ್ಘನ್ ಕಾರ್ಖಾನೆಗಳಲ್ಲಿ ಗಂಡಸರ ಜೊತೆಜೊತೆಯಲ್ಲಿಯೇ ಕೆಲಸ ಮಾಡುತ್ತಿದ್ದುದನ್ನೂ ಕಂಡೆ.

..... ಆದರೆ ಇವೆಲ್ಲ ಕೆಲವೇ ವರ್ಷಗಳು ಮಾತ್ರ !! ರಷ್ಯಾ ಆಫ್ಘಾನಿಸ್ಥಾನವನ್ನು ಕಬಳಿಸಲು ನೋಡಿತು. ಅಮೆರಿಕಾ ಅದರ ವಿರುದ್ಧ ಹೋರಾಡಲು ಆಫ್ಘನ್ನರಿಗೆ ಸಹಾಯ ಮಾಡಿತು. ಕ್ರಮೇಣ ಮೂಲಭೂತವಾದಿಗಳ ಉದಯವಾಯಿತು. ಇದರೊಂದಿಗೆ ಆ ದೇಶ ಸರ್ವನಾಶವನ್ನು ಅನುಭವಿಸಬೇಕಾಯಿತು. ಆಫ್ಘಾನಿಸ್ಥಾನದ ಬಹು ಭಾಗವನ್ನು ತಾಲಿಬಾನ್ ಆಕ್ರಮಿಸಿಕೊಂಡಿತು. ಇಸ್ಲಾಮಿನ ಕಾನೂನು ಎಂದು ತಾವು ಭಾವಿಸಿದ್ದನ್ನು ತಾಲಿಬಾನರು ಹೇರಿದರು. ನಿಧಾನವಾಗಿ ಆಧುನೀಕರಣಕ್ಕೆ ಒಳಗಾಗಿದ್ದ ದೇಶವನ್ನು ಅವರು ಮತ್ತೆ ಹಿಂದಕ್ಕೆ, ಮಧ್ಯಯುಗದೆಡೆಗೆ ಕೊಂಡೊಯ್ದರು...ಹೆಣ್ಣು ಮಕ್ಕಳು ಶಾಲೆಯ ಮುಖ ಕಾಣದೇ ಉಳಿದರು. ಹೆಂಗಸರಿಗೆ ಬುರ್ಖಾ ಕಡ್ಡಾಯವಾಯಿತು. ಎಲ್ಲ ಮನರಂಜನಾ ಕಾರ್ಯಕ್ರಮಗಳೂ ಬಂದ್ ಆದವು. ಆಫ್ಘನ್ನರು ತಮ್ಮ ದೇಶದಲ್ಲೇ ತಾವು ಬಂದಿಗಳಾದರು?

*ವಿಶ್ವವಿಖ್ಯಾತ ಛಾಯಾಗ್ರಾಹಕರೂ ಲೇಖಕರೂ ಆದ*
*ಶ್ರೀ ಟಿ.ಎಸ್. ಸತ್ಯನ್‌ರವರ 'ಕಾಲಕ್ಕೆ ಕನ್ನಡಿ'*
*ಕೃತಿಯಿಂದ ಆಯ್ದ ಸಾಲುಗಳು.*

CPMG/KA/BGS-8/2006-08 RNI NO. 45577 / 88
Posted at Basavanagudi : P.O. On the 25th/29th of Every Month
February 2007

# ಶಿಲ್ಪಾ, ಬ್ರೌನ್, ಬಾಲಿವುಡ್

ಚಾನಲ್ ನಾಲಕ್ಕು
ರಿಯಾಲಿಟಿ ಟಿ.ವಿ. ಶೋ
ಸೆಲೆಬ್ರಿಟಿ 'ಬಿಗ್ ಬ್ರದರ್ಸ್'
ಬಾಲಿವುಡ್‌ನ ಶಿಲ್ಪಾಗೆ
ಜನಾಂಗೀಯ ನಿಂದನೆ
ಮಾನಸಿಕ ಕಿರುಕುಳ
ಎಲ್ಲ ಮಾಧ್ಯಮಗಳೂ ಚಿತ್ರಿಸಿದವು
ಟಿ.ವಿ. ಚಾನಲ್ಲುಗಳು
ನಿರಂತರ ಹೇಳುತ್ತಿದ್ದವು
ಬ್ರಿಟನ್ನಿನ ಛಾನ್ಸಲರ್
ಆಗಲೇ ಬಂದಿದ್ದ ಭಾರತಕ್ಕೆ
ದಿಲ್ಲಿಯಿಂದಲೇ ನೀಡಿದ ಕರೆ
ಹೇಳಿ ಬಿಟ್ಟ ಜನತೆಗೆ
'ಜೆಡ್ ಗೂಡಿಯ ವಿರುದ್ಧ
ಶಿಲ್ಪಾಗೆ ಮತ ಚಲಾಯಿಸಲು'
ಬಗಲು ಹಿಡಿದಿದ್ದ ಕಡತಗಳು
ಪಟಪಟ ಬಿಚ್ಚಿಕೊಂಡವು
ಭಾವುಕತೆಯ ಅಲೆಯಲ್ಲಿ
ತೇಲಿ ಹೋದ ಕುರಿಗಳು ನಾವು
ಹಾಕಿದ ಸಹಿಗಳೆಷ್ಟೋ
ಒಪ್ಪಿಕೊಂಡ ಒಪ್ಪಂದಗಳೆಷ್ಟೋ
ಶಿಲ್ಪಾಗೆ ನೀಡಿದ ಸಾಂತ್ವನದ ಹಿಂದೆ
ಅಡಗಿರುವ ಮುಖವಾಡಗಳೆಷ್ಟೋ
ಮುಖವಾಡ ತೆರೆದು ತೋರಿಸು
ಟಿ.ವಿ. ಚಾನಲ್ ನಾಲಕ್ಕು
ಬಹುಶಃ ಇದಕ್ಕೆ ನನ್ನ ದೇಶ
ಒಪ್ಪಿಗೆ ನೀಡಲಿಕ್ಕಿಲ್ಲವೇನೋ

ಕೆ. ಷರೀಫಾ

"Achala" 108, Skyline
Surabhi,
14 - P, Vidyapeeta Road,
BSK III Stage,
Bangalore - 560 085

To :
Smt./Sri